# ರಂಗ-ರಂಜನ

( ನಾಟಕಗಳ ಸಂಕಲನ )





ಲೇಖಕರು :

ಪಂಡಿತ ಸಿ. ವಾಯ್. ಕವಲಿ,

' ಕಸ್ತೂರೀಕೋಶ ' ಸಂಪಾದಕರು, ಧಾರವಾಡ




# ರಂಗ-ರಂಜನ

ಲೇಖಕರು :

ಪಂಡಿತ : ಸಿ. ವಾಯ್. ಕವಲಿ.

'ಕಸ್ತೂರಿಕೋಶ' ಸಂಪಾದಕರು,

ಧಾ ರ ವಾ ಡ



೫ನೆಯ ಪುಷ್ಪ

ಜುಲೈ ೧೯೫೭ ]                [ ಬೆಲೆ : ೧—೮—೦

ಪ್ರಕಾಶಕರು :
ಶ್ರೀ. ಅಜ್ಜಣ್ಣ ಪಾಟೀಲ, ಬಿ. ಎ., ಬಿ. ಈಡಿ.
ಕಾರ್ಯದರ್ಶಿ,
ಕರ್ನಾಟಕ ಸ. ಸಾ. ಸಂಘ ಲಿ., ಧಾರವಾಡ


ಪ್ರಥಮ ಮುದ್ರಣ : ೨೦೦೦ ಪ್ರತಿಗಳು

ಮುದ್ರಕರು :
ಶ್ರೀ. ಡಿ. ಟಿ. ಕಾಯಸ್ಥ,
ವ್ಯವಸ್ಥಾಪಕ,
ರವೀಂದ್ರ ಮುದ್ರಣಾಲಯ, ಧಾರವಾಡ

# ಪ್ರಕಾಶಕರ ಮಾತು

ಕನ್ನಡವು ಪುರಾತನ ಪ್ರಗತಿಶೀಲ ಭಾಷೆಗಳಲ್ಲೊಂದಾಗಿದೆ. ಆದರೆ ಇತ್ತೀಚೆಗೆ ಅದರ ಪ್ರಗತಿಯು ತೃಪ್ತಿಕರವಾಗಿ ಸಾಗಿಲ್ಲವೆಂದು ಹಿರಿಯ ಕನ್ನಡಿಗರು ಮರುಗತೊಡಗಿದ್ದಾರೆ. ಉತ್ತಮ ಸಾಹಿತ್ಯ ಕೃತಿಗಳು ಸಾಕಷ್ಟು ಹೊರಬರುತ್ತಿಲ್ಲ; ಜನರಲ್ಲಿ ವಾಚನಾಭಿರುಚಿಯು ಬೆಳೆದು ಲೇಖಕರಿಗೆ ಪ್ರೋತ್ಸಾಹನೆ ಇಲ್ಲ. ವ್ಯಕ್ತಿಗಳಾಗಲಿ, ಪುಸ್ತ ವ್ಯಾಪಾರಿಗಳಾಗಲಿ ಸಾಹಿತ್ಯ ಸೇವೆಗಾಗಿ ನಡುಕಟ್ಟಿ ನಿಂತ ಉದಾಹರಣೆಗಳು ನಮ್ಮಲ್ಲಿ ಬೆರಳುಗಳ ಮೇಲೆ ಎಣಿಸುವಷ್ಟು ಮಾತ್ರ. ಹೀಗಾಗಿ ಉತ್ತಮ ಬರೆಹ-ಗಾರರಿಗೆ ಉತ್ತೇಜನವನ್ನು ಕೊಡುವ, ಜನತೆಯಲ್ಲಿ ಓದುವ ಅಭಿರುಚಿಯನ್ನು ಹುಟ್ಟಿಸುವ, ಹಳ್ಳಿಗಳಲ್ಲಿ ಕೂಡ ವಾಚನಾಲಯ ಅಭಿರುಚಿಯನ್ನು ಬೆಳೆಯಿಸುವ ಮತ್ತು ಸುಲಭ ಕ್ರಯಗಳ ಒಳ್ಳೆ ಪುಸ್ತಕಗಳನ್ನು ದೊರಕಿಸುವ ಉದ್ದೇಶಗಳನ್ನೊಳಗೊಂಡ ಒಂದು ಸಂಸ್ಥೆಯನ್ನು ಸಹಕಾರಿ ತತ್ತ್ವದ ಮೇರೆಗೆ ಸಂಘಟಿಸಬೇಕೆಂದು ಮುಂಬಯಿ ರಾಜ್ಯದ ಹಿಂದಿನ ಸಹಕಾರಿ ಮಂತ್ರಿಗಳಾದ ಮಾನ್ಯ ಶ್ರೀ. ಎಂ. ಪಿ. ಪಾಟೀಲ ಅವರು ಮುಂದಾದರು. ಅವರ ಪ್ರಯತ್ನದ ಫಲವೇ ಈ ನಮ್ಮ "ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ ಲಿ., ಧಾರವಾಡ." ಉತ್ತಮ ಲೇಖಕರಿಗೆ ಇನ್ನುಳಿದ ಪ್ರೋತ್ಸಾಹನೆಯ ಸಂಗಡ ಆರ್ಥಿಕ ಪ್ರೋತ್ಸಾಹನೆಯನ್ನೂ ದೊರಕಿಸುವ ಉದ್ದೇಶ ಸಂಸ್ಥೆಗಳಲ್ಲಿ ಈ ಸಂಸ್ಥೆಯೇ ಮೊದಲನೆಯದೆಂದು ಧಾರಾಳವಾಗಿ ಹೇಳಬಹುದು.

ವಿವಿಧ ವಿಷಯಗಳ ಮೇಲೆ ಕೃತಿಗಳನ್ನು ಬರೆಯಿಸಿ ಸದ್ಯಕ್ಕೆ ೧೫೦ ಪುಟಗಳ ನಾಲ್ಕು ಪುಸ್ತಕಗಳನ್ನು ಪ್ರತಿವರುಷ ಒದಗಿಸಲಾಗುವುದು. ಪರಿಸ್ಥಿತಿಯು ಹೆಚ್ಚು ಅನುಕೂಲವಾದಂತೆ ಹೆಚ್ಚು ಹೆಚ್ಚು ಪುಸ್ತಕಗಳನ್ನು ಒದಗಿಸಿ ಕೊಡಬಹುದು. ಕನ್ನಡ ನಾಡಿನ ಸಾಹಿತ್ಯ ಸಂಸ್ಕೃತಿ, ವಿಜ್ಞಾನ, ಸಮಾಜ ಶಾಸ್ತ್ರಗಳನ್ನು ಮುಖ್ಯವಾಗಿಟ್ಟುಕೊಂಡು ಆ ವಿಷಯಗಳನ್ನು ಕುರಿತು ಗ್ರಂಥಗಳನ್ನು ಪ್ರಕಟಿಸಲಾಗುವುದು.

ಹೀಗೆ ಪ್ರತಿವರುಷ ಯಾವ ಯಾವ ವಿಷಯಗಳ ಮೇಲೆ ಪುಸ್ತಕ ಗಳನ್ನು ಪ್ರಕಟಿಸಬೇಕೆಂಬುದನ್ನು ನಿರ್ಣಯಿಸಿ ಹೆಸರಾದ ಲೇಖಕರಿಂದ ಬರೆಯಿಸಿ, ಅಂತಹ ಲೇಖಕರಿಗೆ ಸಂಭಾವನೆಯನ್ನು ಕೊಡಲಾಗುವುದು. ಗ್ರಂಥ ಪ್ರಕಟನೆಗಾಗಿ ಬರಬಹುದಾದ ಆವಶ್ಯಕ ಎಲ್ಲ ವೆಚ್ಚವನ್ನು ವಹಿಸಿ ಸಂಘದ ನಿಯಮಗಳಿಗನುಸರಿಸಿ, ಒಟ್ಟಿನ ಆದಾಯದಲ್ಲಿ ಕಳೆದು, ಉಳಿದ ನಿಕ್ಕಿ ಲಾಭದಲ್ಲಿ ಅರ್ಧದಷ್ಟನ್ನು ಲೇಖಕರಿಗೆ ಕೊಡಲಾಗುವುದು. ಆವಶ್ಯಕತೆಯ ಮೇರೆಗೆ ಅವುಗಳ ಎರಡನೆಯ ಹಾಗೂ ಮುಂದಿನ ಮುದ್ರಣ ಗಳನ್ನು ಸಹ ಪ್ರಕಟಿಸಲಾಗುವುದು. ಆಗಲೂ ಸಹಿತ ಇದೇ ನಿಯಮವು ಅನ್ವಯಿಸುವುದು. ಆದರೆ ಪ್ರಾರಂಭಕ್ಕೆ ಲೇಖಕರಿಗೆ, ಕೈ ಬರಹದ ಪ್ರತಿಯು ತಲುಪಿ ಸಂಘದಿಂದ ಸ್ವೀಕರಿಸಲ್ಪಟ್ಟ ಮೇಲೆ, ಕೆಲವೊಂದು ಹಣವನ್ನು, ನಿಯಮಗಳಿಗನುಸರಿಸಿ, ಮುಂಗಡವಾಗಿಯೂ ಕೊಡಲಾಗು ವುದು.

ನಮ್ಮ ಮಾಲೆಯ ಐದನೆಯ ಪುಷ್ಪವಾದ "ರಂಗ-ರಂಜನ"ವು ಈಗ ಹೊರಬಿದ್ದಿದೆ. ನಮ್ಮ ನಾಡಿನ ಪ್ರಸಿದ್ಧ ಲೇಖಕರಾದ ಪಂಡಿತ ಸಿ. ವಾಯ್. ಕವಲಿ ಅವರು 'ರಂಗ-ರಂಜನ'ದಲ್ಲಿ ಇಂದಿನ ನಮ್ಮ ಸಮಾಜದ ಕುಂದು ಕೊರತೆಗಳನ್ನು ಜನರಿಗೆ ಎತ್ತಿತೋರಿಸಿ ಕೊಟ್ಟು ಅದಕ್ಕೆ ತಕ್ಕ ಪರಿಹಾರ ಮಾರ್ಗವನ್ನು ಸೂಚಿಸಿದ್ದಾರೆ. ಸಾಹಿತ್ಯದ ವಿಷಯಕ್ಕೆ ಮಾತನಾಡುತ್ತ "ಅದು ಬರೀ ಹೊಟ್ಟೆಯ ವಿಷಯವಲ್ಲ, ಹೃದಯದ್ದು; ಸಾಹಿತ್ಯದ ಅಂತಿಮ ಗುರಿ 'ಆನಂದ'ವಾದರೂ ಅದು ಸಮಾಜ ಸುಧಾರಕರ ಕೈಗೆ ಸಿಲುಕಿದಾಗ ಅದರ ಉಪಯೋಗವು "ಜಲಗಾರ"ನಂತೆಯೂ ಆಗುವುದು", ಎಂಬ 'ಷಾ' ರವರ ಮಾತನ್ನು ನೆನೆದರೆ ಶ್ರೀ. ಪಂಡಿತ ಕವಲಿಯವರು 'ರಂಗ-ರಂಜನ' ದಲ್ಲಿ ಇವೆರಡನ್ನೂ ಸಾಧಿಸಿದ್ದಾರೆಂದು ಹೇಳಬಹುದು. 'ರಂಗ-ರಂಜನ'ವು ನಮ್ಮ ಇಂದಿನ ಸಮಾಜದ ಕೊಳಕನ್ನು ತೊಳೆದು ಮಾನವನ ಜೀವನದ ಮೇಲೆ ಬೆಳಕನ್ನು ಬೀರುವಲ್ಲಿಯೂ ಅಷ್ಟೇ ಯಶಸ್ವಿಯಾಗಿದೆ. ಜೀವನದ ದಾರಿದೀಪವಾಗಿದೆ.

ಇಂತಹ ಉಚ್ಚ ತರಗತಿಯ ಪುಸ್ತಕಗಳನ್ನು ಪ್ರಕಟಿಸುವ ಸಂಸ್ಥೆಗಳ ಘನವಾದ ಉದ್ದೇಶಗಳು ಸಫಲವಾಗಬೇಕಾದರೆ ಲೇಖಕರ ಹಾಗೂ

ಮತ್ತು ಸಾರ್ವಜನಿಕರ ಸಹಕಾರವು ಅತ್ಯವಶ್ಯ. ಈ ವಿಷಯದಲ್ಲಿ ಕನ್ನಡದ ಅಭಿಮಾನಿಗಳೆಲ್ಲರೂ, ಚಂದಾದಾರರಾಗಿ, ಶೇರುದಾರರಾಗಿ ಸಹಕರಿಸಿ ಪ್ರೋತ್ಸಾಹಿಸಬೇಕಾಗಿ ವಿನಂತಿ.

ಈ ಸಂಘದ ಶೇರುದಾರರಾಗಬೇಕಾದರೆ ಕನಿಷ್ಟ ೨೫ ರೂ. ಗಳ ಒಂದು ಶೇರನ್ನು ಕೊಳ್ಳಬೇಕಾಗುವುದು. ಮತ್ತು ಒಂದು ರೂಪಾಯಿ ಪ್ರವೇಶ ಧನವನ್ನು ಕಳಿಸಬೇಕಾಗುವುದು. ಸದಸ್ಯರಾಗಿದ್ದು ಚಂದಾದಾರ ರಾಗಬಯಸುವವರು ೫ ರೂ. ಗಳನ್ನು ಪ್ರತಿವರುಷ ಕೊಡಬೇಕಾಗುವುದು. ಸದಸ್ಯತ್ವವಿಲ್ಲದೆ ಚಂದಾದಾರರಾಗಬಯಸುವವರು ಪ್ರತಿವರುಷ ೬ ರೂ. ಗಳನ್ನು ಚಂದಾ ಹಣವೆಂದು ಕೊಡಬೇಕಾಗುವುದು. ಈ ಬಗೆಗೆ ಕನ್ನಡಿ ಗರೆಲ್ಲರೂ ಸಹಕರಿಸಬೇಕೆಂದು ಬಿನ್ನಹ.

ನಮ್ಮ ಕರೆಗೆ ಓ ಗೊಟ್ಟು ಈ ಪುಸ್ತಕವನ್ನು ಬರೆದುಕೊಟ್ಟ ಶ್ರೀ. ಪಂಡಿತ ಸಿ. ವಾಯ್. ಕವಲಿ, ಅವರಿಗೆ ನಾವು ತುಂಬಾ ಋಣಿಯಾ ಗಿದ್ದೇವೆ. ಈ ಪುಸ್ತಕವನ್ನು ಅಲ್ಪ ವೇಳೆಯಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟ ರವೀಂದ್ರ ಮುದ್ರಣಾಲಯ, ಧಾರವಾಡ, ಅವರಿಗೂ ನಾವು ತುಂಬಾ ಉಪಕೃತರು.

ಗುಣ ಮತ್ತು ಗಾತ್ರದಲ್ಲಿ ಉತ್ತಮ ಸಾಹಿತ್ಯ ಕೃತಿಗಳನ್ನು ಅಲ್ಪ ಬೆಲೆ ಯಲ್ಲಿ ಪ್ರಕಟಿಸುವ ಉದ್ದೇಶವುಳ್ಳ ನಮ್ಮ ಸಂಸ್ಥೆಗೆ ಈಗಾಗಲೇ ಚಂದಾ-ದಾರರಾಗಿ ಅನೇಕ ಮಹನೀಯರು ಮತ್ತು ಸಂಘಸಂಸ್ಥೆಗಳು ನೀಡಿರುವ ನೆರವನ್ನು ನಾವು ಮರೆಯುವಂತಿಲ್ಲ. ನಮ್ಮ ಈ ಐದನೆಯ ಪುಷ್ಪ ಗುಚ್ಛ 'ರಂಗ-ರಂಜನ'ವನ್ನು ಕನ್ನಡಿಗರೆಲ್ಲರೂ ಹೃತ್ಪೂರ್ವಕವಾಗಿ ಸ್ವಾಗತಿಸುವ ರೆಂದು ಆಶಿಸುತ್ತೇವೆ.

| | | |
|---|---|---|
| ಧಾರವಾಡ | ಡಾ. ಶಿ. ಚೆ. ನಂದಿಮಠ | ಶ್ರೀ. ವ್ಹಿ. ಎಸ್. ಬಸವನಾಳ |
| ದಿ. ೩೧-೭-೧೯೫೭ | ಕಾರ್ಯಾಧ್ಯಕ್ಷರು | ಕಾರ್ಯಾಧ್ಯಕ್ಷರು |
| | ಸಂಪಾದಕ ಮಂಡಳ | ಸಂಚಾಲಕ ಸಮಿತಿ |

# ಪ್ರಸ್ತಾವನೆ

ಪಂಡಿತ ಕವಲಿಯವರು ಬರೆದ 'ರಂಗ-ರಂಜನ'ವೆಂಬ ನಾಟಕ ಸಂಗ್ರಹಕ್ಕೆ ಪ್ರಸ್ತಾವನಾ ರೂಪವಾಗಿ ನಾನು ಎರಡು ಮಾತು ಬರೆಯಬೇಕೆಂದು ಪ್ರಕಾಶರ ಪರವಾಗಿ ನಾಟಕಕಾರರೆ ಮಿತ್ರಭಾವದಿಂದ ಸೂಚಿಸಿದರು. ಶ್ರೀ. ಕವಲಿಯವರ ಉದ್ಯೋಗಪ್ರಿಯತೆಯು ಸರ್ವವಿದಿತವಿದೆ. ರಂಗ-ಭೂಮಿಗೂ ಅವರಿಗೂ ಇರುವ ಸಂಬಂಧವು ಬಹುಮುಖವಾಗಿರುವದಲ್ಲದೆ, ಚಿರಕಾಲ ಬಾಳಿ ಬಂದಿದೆ. ಅವರು ಪಂಡಿತರಾದರೂ ಅವರ ಶೈಲಿಯು ವಿಷಯಾನುಗುಣವಾಗಿ ಮತ್ತು ಪ್ರೇಕ್ಷಕರನ್ನೂ ವಾಚಕರನ್ನೂ ಅನುಲಕ್ಷಿಸಿ ತಕ್ಕ ಹದವನ್ನು ಪಡೆಯುವದು; ಗ್ರಂಥಗಾಂಭೀರ್ಯವನ್ನು ಬಿಟ್ಟರೂ ಗ್ರಾಮ್ಯದ ಸುಳಿಗೆ ಸಿಗದೆ ತನ್ನ ಹಾದಿ ತೆಗೆಯುವದು.

ಪ್ರಕೃತ ಸಂಗ್ರಹದಲ್ಲಿ, ನಾಲ್ಕು ಅಂಕಗಳ ಒಂದು ಸಂಗೀತ ನಾಟಕವು ಸುಮಾರು ನೂರು ಪುಟಗಳನ್ನು ವ್ಯಾಪಿಸಿದೆ; ಉಳಿದ ಐವತ್ತು ಪುಟಗಳಲ್ಲಿ ಎರಡು ಲಘುನಾಟಿಕೆಗಳು ಮನೆಮಾಡಿಕೊಂಡಿವೆ. ಮೊದಲಿನ ಎರಡು ನಾಟಕಗಳು ಇಂದಿನ ಸಾಮಾಜಿಕ ಸಮಸ್ಯೆಗಳಲ್ಲೆರಡರ ಸುಖಾಂತವನ್ನು ರೂಪಿಸಿವೆ. ಸಾಮಾಜಿಕ ಸಮಸ್ಯೆಗಳ ಪರಿಹಾರವು ಈ ನಾಟಕದಂತೆ ಜೀವನದಲ್ಲೂ ಸಾಗಿದರೆ ಅವು ಅಂಥ ಸಮಸ್ಯೆಗಳೇ ಅಲ್ಲವೇನೋ ಎಂದು ತೋರುವಂತಾಗುವುದು.

ಮನುಷ್ಯನ ಹೃದಯದಲ್ಲಿ ಸುಪ್ತವಾಗಿರುವ ಉದಾತ್ತತೆಯನ್ನು ಜಾಗೃತಗೊಳಿಸಿ, ಅದನ್ನು ಮಾನವ ಜೀವಿತದಲ್ಲಿ ಸ್ಥಿರಗೊಳಿಸಲು ಸಾಹಿತ್ಯವು ಅನಾದಿಕಾಲದಿಂದ ಪ್ರಯತ್ನ ಪಡುತ್ತಲೇ ಇದೆ. ಈ ಕಾರ್ಯದಲ್ಲಿ ಸಾಹಿತ್ಯ ಕಲೆಗೆ ಇನ್ನೂ ಪೂರ್ಣ ಯಶಸ್ಸು ಪ್ರಾಪ್ತವಾಗಿರದಿದ್ದರೂ, ಆ ಆದರ್ಶದತ್ತ ಪ್ರಗತಿ ನಡೆದಿದೆ ಎಂಬ ಅನುಭವ ಭರವಸೆಗಳಿಂದಲೇ ಬರೆಯುವವರು

ಬರೆಯುತ್ತಿದ್ದಾರೆ, ಓದುವವರು ತಿಳಿದು ಒರೆಯುತ್ತಿದ್ದಾರೆ; ನೋಡುವವರು ಒಳಗೆಲ್ಲೋ ಅರಿತು ಮಾರ್ಪಾಟುಗೊಳ್ಳುತ್ತಿದ್ದಾರೆ.

**ಅಸ್ಪೃಶ್ಯತೆ ಒಂದು ಮುಖದಲ್ಲಿ ಕರ್ಮಸಮಸ್ಯೆ, ಮದ್ಯ-ಪಾನವು ಅಸುಖ ಸಮಸ್ಯೆ, ಕರ್ಣನಂಥವರ ಕುಲಪಾದವು ಅಧಿಕಾರ ಸಮಸ್ಯೆ.** ಆಧುನಿಕ ಕಾಲದಲ್ಲಿಯೂ ರಸಿಯಾ, ಜರ್ಮನಿ, ಅಮೇರಿಕಾ, ಭಾರತ ದೇಶಗಳು ಕುಲಗ್ರಂಥಿಯನ್ನು ಗರ್ಭೀಕರಿಸಿರುವ ಅಧಿಕಾರ ಸಮಸ್ಯೆಗಳಾಗಿ ಪರಿಣಮಿಸಿವೆ. ಜರ್ಮನಿಯ ಒಂದು ಗ್ರಂಥ ಮುಗಿದಿದೆ. ಉಳಿದ ದೇಶಗಳು ಗ್ರಂದದ ಗ್ರಂಥಿಯನ್ನು ಬಿಚ್ಚಿಕೊಂಡು ಕುಳಿತಿವೆ. ಅಧ್ಯಯನ ಮುಗಿದು ವಿನಯಾಚರಣೆಗೆ ಪ್ರಾರಂಭವಾಗುವದೋ? ಯುದ್ಧಕಾಂಡದ ಬೂದಿ ಹಾರದೆ ಶಾಂತಿಪರ್ವದ ಮಂತ್ರತಂತ್ರ ಪ್ರಾರಂಭವಾಗದೋ–ನೋಡಬೇಕಾಗಿದೆ. ಕೌರವ-ಪಾಂಡವರ ದಾಯಾದಕಲಹದಲ್ಲಾದ ಕರ್ಣನ ಬಲಿಯು ದುರ್ದೈವದ ದುರಂತ ಪ್ರಕರಣವೆನ್ನಬೇಕು. ಕರ್ಣ ಸತ್ತ ಮೇಲಾದರೂ ತಿಳಿದವರು ನಾಲ್ಕುಜನ ಅತ್ತರು, ಇದೇ ದುಃಖಗರ್ಭಿತ ಸಂತೋಷ.

'ಪುನರ್ಜನ್ಮ'ದೊಳಗಿನ ಪಾನಪ್ರತಿಬಂಧ ಸಮಸ್ಯೆಯ ಪರಿಹಾರ ಸುಲಭಸಾಧ್ಯವಲ್ಲ— ಎನ್ನಬಹುದು. ಆದರೂ ನಾಟಕೀಯತೆಯ ಆವರಣದಲ್ಲಿ ಭಾವನಾಮಯತೆಯಿಂದ ಒಂದು ಸಂಭಾವ್ಯತೆಯನ್ನು ಕಲ್ಪಿಸಿದ್ದಾರೆ ನಾಟಕಕಾರರು. ಸಹೃದಯರಿಗೆ ಅದು ಸಂವೇದ್ಯ ಎಂದು ತೋರುತ್ತದೆ. ಕರ್ಣನ ಜೀವನದ ಸಂವಿಧಾನಕವನ್ನು ರೂಪುಗೊಳಿಸುವಾಗ ಚಮತ್ಕೃತಿಯ ಚಾತುರ್ಯದ ವಿವೇಕವನ್ನು ಹೆಣೆದಿದ್ದಾರೆ. **'ಸಮಾಜ ಸಾಮರಸ್ಯ'ವನ್ನಂತೂ ಜೋಕೆ ತೂಕಗಳಿಂದ ದಂಡೆಗೆ ಮುಟ್ಟಿಸಿದ್ದಾರೆ.** ಇದರೊಳಗಿನ ಸಂಗೀತ ಹಾಗೂ ಹೀಗೂ ಹೊಂದಿಕೊಳ್ಳುತ್ತದೆ. ನಮ್ಮ ಪ್ರೇಕ್ಷಕರು ಅತಿಚಿಕಿತ್ಸಕರಲ್ಲ.

ಅಂತೂ ಶ್ರೀ ಕವಲಿಯವರು ಓದಲಿಕ್ಕೂ ಆಡಲಿಕ್ಕೂ ಅನುಕೂಲವಾದ ರೂಪಕಗಳನ್ನು ರಚಿಸಿದ್ದಾರೆ. ಮನರಂಜನೆ ಇದ್ದೆ ಇದೆ. ಇಲ್ಲಿಯು

ಹಾಸ್ಯೋಕ್ತಿಗಳು ಒಟ್ಟಿನಲ್ಲಿ ಹಿತ-ಮಿತವಾಗಿವೆ. ಅನೇಕ ಮುದ್ರಣ ದೋಷಗಳಿಂದ ಭಾವಾರ್ಥಕ್ಕೆ ತೊಂದರೆಯಾದರೂ ಅವು ತಿಳಿದ ಮೇಲೆ ಒದಗುವ ನಗೆಯೊಡನೆ ಮುದ್ರಾರಾಕ್ಷಸನ ಪ್ರಸಾದವೂ ದೊರೆಯುತ್ತದೆ. ಪ್ರಚಾರಕ ಪ್ರೇರಣೆಯು ನಾಟಕದ ಹಿನ್ನೆಲೆಯಾಗಿದ್ದರೂ ಸಾಹಿತ್ಯ ಪಾಕದಿಂದ ಪಂಡಿತರು ಬರೆವಣಿಗೆಯಲ್ಲಿ ಸ್ವಾರಸ್ಯ ತಂದಿದ್ದಾರೆ. ಶ್ರೀ. ಕವಲಿಯವರ ಸಾಹಿತ್ಯ ಸೇವೆಗೆ ಹೀಗೆಯೆ ಇಂಬು ದೊರೆತು ಅದು ಇಂಬಾಗಿ ಬೆಳೆಯಲಿ ಎಂದು ಹಾರಯ್ಸುತ್ತೇನೆ.

ತಾ. ೩೧-೭-೧೯೫೭
ಸಾಧನಕೇರಿ,
ಧಾರವಾಡ.

ದ. ರಾ. ಬೇಂದ್ರೆ

# ಬರೆಹಗಾರನ ಬಗೆಯಲ್ಲಿ

ರಂಗ-ರಂಜನ ನಾಟಕ ಸಂಕಲನ ಸುಮನದಿಂದ ಮೊತ್ತಮೊದಲಿಗೆ ಕನ್ನಡ ಕಲಾದೇವತೆಯ ಸಿರಿಯಡಿಯನ್ನು ಸಿಂಗರಿಸುವೆ; ಬಳಿಕ ಆ ಕೃಪಾ ಪ್ರಸಾದವನ್ನು ಕನ್ನಡ ತಾಯಿಯ ಸಂತತಿಗೆ ಸಮರ್ಪಿಸುವೆ. ಈ ಸಿಂಗಾರ ಸಮರ್ಪಣೆಗಳು ನನ್ನ ಹೃದಯದ ಹಿಗ್ಗಿನ ಬುಗ್ಗೆಗಳು.

ಈ ನಾಟಕ ಸಂಕಲನದಲ್ಲಿ ಮುಖ್ಯವಾಗಿ, **ಸಮಾಜ ಸಾಮರಸ್ಯ**— ಹರಿಜನೋದ್ಧಾರ—ಎಂಬ ದೀರ್ಘ ನಾಟಕ; ಅನುಷಂಗಿಕವಾಗಿ, ಪಾನಪ್ರತಿ ಬಂಧವನ್ನು ಪ್ರತಿಪಾದಿಸುವ **ಪುನರ್ಜನ್ಮ** ಮತ್ತು ಜಾತೀಯತೆಯ ದುರಂತಕ್ಕೊಳಗಾದ ಕರ್ಣನನ್ನು ಕುರಿತ **ರಣದೇವತೆಯ ರಂಗಪಂಚಮಿ** ಎಂಬ ಎರಡು ಲಘು ನಾಟಿಕೆಗಳು. ನಮಾಜ ಸಾಮರಸ್ಯ ಮತ್ತು ಪುನರ್ಜನ್ಮ ಪ್ರಚಾರಾತ್ಮಕ ಸಾಹಿತ್ಯ; ರಣದೇವತೆಯ ರಂಗಪಂಚಮಿ ಸಮಾಜ ಸಾಮರಸ್ಯ ' ಕ್ಕೆ ಪೂರಕ ಉದಾಹರಣವಾದ ಭಾರತ ಕಥಾ ಸಾಹಿತ್ಯ.

ಈ ಮೂರೂ ಕೃತಿಗಳನ್ನು ಕುರಿತು **ಬರೆಹಗಾರನ ಬಗೆಯಲ್ಲಿದ್ದು**ದನ್ನು ತೆರೆದು ತೋರಿಸಬೇಕಾಗಿದೆ.

## ೧ ಸಮಾಜ ಸಾಮರಸ್ಯ

ಸಮಾಜ ಸಾಮರಸ್ಯ ಅಸ್ಪೃಶ್ಯತಾ ನಿವಾರಣಾ ಸಮಸ್ಯೆಯ ಪರಿಹಾರವನ್ನು ಸಾಧಿಸಹೊರಟಿದೆ. **ಜಾತೀಯತೆಯ ಜಂಭವನ್ನು ಅಳಿಯ-ಬೇಕು, ವರ್ಗರಹಿತ ಸಮಾಜವನ್ನು ಕಟ್ಟಬೇಕು,** ಎಂದು ಸ್ವತಂತ್ರ ಭಾರತ ಸರಕಾರದ ಹೆಬ್ಬಯಕೆ. ಈ ಇಚ್ಛೆಯನ್ನು ಈಡೇರಿಸುವುದಕ್ಕೆ ಸರಕಾರ ಶಾಸನಗಳನ್ನು ಮಾಡುತ್ತಿದೆ; ಸಾಮಾಜಿಕರ ಹೃದಯ ಪರಿವರ್ತನೆಯ ಪ್ರಯತ್ನಗಳನ್ನೂ ನಡೆಸಿದೆ. ಆದರೆ ಬಹುಕಾಲದಿಂದ ಬೆಳೆದುಬಂದ ಜಾತಿಭೂತ ಪ್ರತಿಭಟಿಸಿ ಕೇಳುತ್ತಿದೆ—**ಸರಕಾರದ ಹೆಬ್ಬಯಕೆ ಸಾಧುವೇ ಮತ್ತು ಸಾಧ್ಯವೇ?** ಎಂದು.

ಸಾಧುವೇ ಎಂಬ ಪ್ರಥಮ ಆಕಾಂಕ್ಷೆಗೆ 'ಅಹುದು' ಎಂದು ನನ್ನ ಉತ್ತರ. ಭಾರತದ ಪ್ರಾಚೀನ ಪುಣ್ಯಪುರುಷರು ಏಕವರ್ಣವನ್ನೇ ಆಚರಿಸುತ್ತಿದ್ದರು. ಇದರಿಂದ ಸಮಾಜದಲ್ಲಿ ಹಲವಾರು ಉಪಜೀವನದ ಉದ್ಯೋಗಗಳ ಪ್ರಗತಿಗೆ ಪ್ರತಿಬಂಧವಾಯಿತೇನೊ! ಬಳಿಕ ಗುಣಕರ್ಮಾನುಸಾರವಾಗಿ ಚತುರ್ವರ್ಣಗನ್ನು ಮಾಡಿದರು. ಜೀವನಾವಶ್ಯಕ ಉದ್ಯೋಗಗಳು ಬೆಳೆದಂತೆ ಚತುರ್ವರ್ಣಗಳೇ ಒಡೆದು ಹಲವಾರು ಜಾತಿಗಳಾಗಿರಬೇಕು. ಇಲ್ಲಿ, ಜಾತಿ **ಎಂದರೆ ಹಿರಿಯರಿಂದ ಕಿರಿಯರಿಗೆ ಬಂದ ಅನುವಂಶಿಕ ಉದ್ಯೋಗ ಕೌಶಲ್ಯ, ಕಸಬುಗಾರಿಕೆ**—ಎಂದರ್ಥ. ಜಾತಿಗಳ ಸಂಖ್ಯೆ ಬೆಳೆದರೂ ಜನರಲ್ಲಿ ಸೌಹಾರ್ದವಿತ್ತು, ಸಾಮರಸ್ಯವಿತ್ತು.

ಮುಂದೆ ಯಾವುದೋ ಕಾಲದಲ್ಲಿ ವಿಷಗಾಳಿ ಬೀಸಿತು, ಜಾತೀಯತೆಯ ಕೀಳುಮೇಲುಗಳ ಕಲಹಕ್ಕೆ ಆರಂಭವಾಯಿತು. ಪರಿಣಾಮವಾಗಿ, ಪಕ್ಷಪಂಗಡಗಳು ಹುಟ್ಟಿದುವು, ದ್ವೇಷ ಮಾತ್ಸರ್ಯಗಳು ತಲೆಯೆತ್ತಿದುವು; ಗುಂಪುಗಳು ಒಂದರಿಂದೊಂದು ಸಿಡಿದು ನಿಂತುವು! ಒಟ್ಟಾರೆ, **ಅಖಂಡ ರಾಷ್ಟ್ರೀಯ ಭಾವನೆ ಗಾಳಿಗೊಡ್ಡಿದ ಸೊಡರಿನಂತಾಯಿತು.**

ತತ್ತ್ವಭ್ರಷ್ಟ ಆಚಾರ ಅತ್ಯಾಚಾರ ಪ್ರಿಯರಿಗೆ ಆನಂದದ **ಆವಾಹನ!** ಭಾರತೀಯರ ವಿರೋಧ-ವೈರಸ್ಯಗಳು ಪರಕೀಯರನ್ನು ಕೈ ಮಾಡಿ ಕರೆದುವು. ಒಬ್ಬರಹಿಂದೊಬ್ಬರಂತೆ ಅಫಗಾನರೂ ಮೊಗಲರೂ ಬ್ರಿಟಿಶರೂ ಭಾರತವನ್ನು ವಶಪಡಿಸಿಕೊಂಡರು; ಆರೇಳು ನೂರು ವರುಷ ಭಾರತೀಯರನ್ನು ತುಳಿತುಳಿದು ಆಳಿದರು.

ಈ ಬಗೆಗೆ ರಾಮಕೃಷ್ಣ ಮಿಶನಿನ ಸ್ವಾಮಿಗಳೊಬ್ಬರು ಹೇಳುತ್ತಾರೆ:— The social leaders of the middle ages were short-sighted and supertitious; They had love of power, they wished to rule over the people and keep them under their control. Today India would be one of the mightiest nations in the world if these short-sighted orthodox social leaders had not

pursued a policy of seclusion and isolation, which resulted in absolute disunion among the members of the different classes of the Hindus. England could not have held her dominant sword over the heads of three hundred Millions of people in India, if there had been unity among the isolated Communities and clans of the four divisions.

(ಇದೇ ಅಭಿಪ್ರಾಯವನ್ನು ಸಮರ್ಥಿಸುವಂತೆ ಬ್ರಿಟಿಶರೇ ಆದ Sir Monier willioms ಅವರ ಅವತರಣಿಕೆ ಕೊಟ್ಟಿದ್ದಾರೆ.)

......Certainly the entagonism of these Caste associations and trade leagues has helped us to govern the Country by making political combinations impossible. ( India and her people— by Swami Abhedananda. )

ಇವೇ ಅಭಿಪ್ರಾಯಗಳನ್ನು ಸಮಾಜ ಸಾಮರಸ್ಯ ನಾಟಕದ ೪ನೆಯ ಅಂಕದ ಪ್ರಥಮ ಪ್ರವೇಶದಲ್ಲಿ ಹನುಮಂತಪ್ಪನ ಪಾತ್ರದ ಮೂಲಕ ಮಾತನಾಡಿಸಿರುವೆ.

ಅಂದು ಪರತಂತ್ರವಾದ ಭಾರತ ಮಹಾತ್ಮಾ ಗಾಂಧೀಯವರ ತಪಸ್ಸಿನ ಫಲವಾಗಿ ೧೯೪೭ನೆಯ ಅಗಸ್ಟ ೧೫ನೆಯ ದಿನಾಂಕಕ್ಕೆ ಸ್ವಾತಂತ್ರ್ಯವನ್ನು ಪಡೆಯಿತು. ಹೇಗೆ ? ಏಕೆ ? ಮಹಾತ್ಮರು ರಾಜಕೀಯದ ಮಟ್ಟಿಗಾದರೂ ಭಾರತೀಯರ ಜಾತೀಯತೆಯ ಭೂತವನ್ನು ಬಿಡಿಸಿದರು. ಹಳ್ಳಿ-ಹಳ್ಳಿಗಳಲ್ಲಿಯೂ ಹೋಗಿ ರಾಜಕೀಯ ಸಮಾಜ-ಸಾಮರಸ್ಯವನ್ನುಂಟು ಮಾಡಿದರು; ಎಲ್ಲೆಲ್ಲಿಯೂ ಅಖಂಡ ರಾಷ್ಟ್ರೀಯತಾ ಭಾವನೆಯನ್ನು ಬಿತ್ತಿ ಬೆಳೆ

ಸಿದರು. ಆದರಿಂದ ಇಡಿಯ ಭಾರತವೇ ಒಕ್ಕೊರಲಿನಿಂದ ಸ್ವಾತಂತ್ರ್ಯವನ್ನು ಬೇಡತೊಡಗಿತು. ಭಾರತವನ್ನು ಭಾರತೀಯರಿಗೆ ಬಿಡದೆ ಬ್ರಿಟಿಶರಿಗೆ ಬೇರೆ ಹಾದಿಯೇ ಇಲ್ಲವಾಯಿತು.

ಇದು ರಾಜಕೀಯ ಸ್ವಾತಂತ್ರ್ಯವಾಯಿತು. ಸಿಕ್ಕ ಸ್ವಾತಂತ್ರ್ಯವಕ್ಕ ಬೇಕಾದರೆ ಆರ್ಥಿಕ ಸ್ವಾತಂತ್ರ್ಯವೂ ಭಾರತೀಯರಿಗೆ ಬೇಕು. ಆರ್ಥಿಕ ಅಭಿವೃದ್ಧಿಗೆ ಜೀವನಾವಶ್ಯಕವಾದ ಎಲ್ಲ ಉದ್ಯೋಗಗಳು ಭರದಿಂದ ಬೆಳೆಯು ಬೇಕು. ಉದ್ಯೋಗಗಳ ಬೆಳವಣಿಗೆಗೆ ಸರ್ವ ಕಲಾಕುಶಲರ—ಅರ್ಥಾತ್ ಸರ್ವ ಜಾತೀಯರ— ಸಂಘಟನೆ ಅತ್ಯವಶ್ಯ. ಸಂಘಟನೆ ಸುಲಭವಾಗ ಬೇಕಾದರೆ, ಜಾತೀಯ ಕೀಳು-ಮೇಲುಗಳ ಹೀನ ಮನೋವೃತ್ತಿ ಹಿಂಗ ಬೇಕು. ಹೀಗಾದಾಗಲೇ ಆರ್ಥಿಕ ಪ್ರಗತಿಯಾಗುವುದು, ಅದರ ಬಲದಿಂದ ಸ್ವಾತಂತ್ರ್ಯ ಸ್ಥಿರಸ್ಥಾಯಿಯಾಗುವುದು. ಈ ಸಂಕಲ್ಪ ಸಿದ್ಧಿಯಾಗಬೇಕಾದರೆ "ಜಾತೀಯ ಜಂಭ ಅಳಿಯಬೇಕು, ವರ್ಗರಹಿತ ಸಮಾಜವನ್ನು ಕಟ್ಟಬೇಕು" ಎನ್ನುವ ಭಾರತ ಸರಕಾರದ ಹೆಬ್ಬಯಕೆ ಸಾಧುವಲ್ಲವೆಂದು ಹೇಳುವುದು ಯಾವ ಸ್ವಾತಂತ್ರ್ಯಪ್ರಿಯನಿಗಾದರೂ ಸಾಧ್ಯವಿದೆಯೇ? **ಇಂತಹ ಸಾಧುವಾದವನ್ನು ಸಮರ್ಥಿಸುವುದೇ ಸಮಾಜ-ಸಾಮರಸ್ಯ ನಾಟಕದ ಹೆಗ್ಗುರಿ.**

ಜಾತಿಭೂತದ ಎರಡನೆಯ ಪ್ರತಿಭಟನೆ— ಸಾಧ್ಯವೇ ?— ಎಂಬು ದಕ್ಕೂ 'ಅಹುದು' ಎಂದು ಉತ್ತರ ಕೊಡಬಹುದು; ಅದನ್ನು ಪ್ರತಿಪಾದಿ ಸುವುದು ಮಾತ್ರ ಕಠಿನ. ಏಕೆಂದರೆ—

ವೈದಿಕಧರ್ಮ ಚಾತುರ್ವರ್ಣ್ಯವನ್ನು ಸೃಷ್ಟಿಸಿತು. ಪ್ರಾರಂಭದಲ್ಲಿ ವಿವಿಧ ವರ್ಣಗಳೊಳಗೆ ಶ್ರೇಷ್ಠ-ಕನಿಷ್ಠ ಭಾವನೆಗಳಿರಲಾರವು. ಮುಂದೆ— ಧಿಗ್ಬಲಂ ಕ್ಷತ್ರಿಯ ಬಲಂ, ಬ್ರಹ್ಮ ಬಲಂ ಬಲಂ—ಎಂದು ವಿಶ್ವಾಮಿತ್ರ ಮುನಿ ಹೇಳಿದಂತೆ ಪುರಾಣವಿದೆ. ಆ ಕಾಲದಲ್ಲಾಗಲೇ ವರ್ಣಗಳಲ್ಲಿ ಕೀಳು ಮೇಲುಗಳು ಹುಟ್ಟಿದ್ದವೇನೋ ಎನಿಸುತ್ತಿದೆ. ಈವೈತರಣೀ ಪ್ರವಾಹ ಮುಂದೆಯೂ ಹರಿಯಿತು-ಎಂಬುದನ್ನು ಅಭೇದಾನಂದ ಸ್ವಾಮಿಗಳ ವಚನ (English quotation) ದಲ್ಲಿ ಕಾಣುತ್ತೇವೆ.

## XVIII

ಇತಿಹಾಸಕಾಲದ ಭಾರತದಲ್ಲಿ, ಚಾತುರ್ವರ್ಣ್ಯವನ್ನು ಮನ್ನಿಸದ ಬೌದ್ಧ-ಜೈನ ಧರ್ಮಗಳುದಿಸಿದುವು, ವರ್ಣವ್ಯತ್ಯಾಸವನ್ನು ಪೂರ್ಣ ವಿರೋಧಿಸಿದುವು. ಆದರೆ ಸಮಾಜನಾಮರಸ್ಯವನ್ನು ಮಾಡಿದುವೇ ? ಎಂದು ಈಗಲೂ ಕೇಳಬೇಕಾಗುತ್ತಿದೆ. ಅಹುದು ಎಂದು ಉತ್ತರ ಬರುವಂತಿದ್ದರೆ— ಅಸ್ಪೃಶ್ಯರ ಮಾತು ಹಾಗಿರಲಿ— ಭಾರತದಲ್ಲಿ ನೂರಾರು ಜಾತಿಗಳೂ ಮತ್ತೆ ಅವುಗಳಲ್ಲಿ ಎಣಿಕೆಯಿಲ್ಲದಷ್ಟು ಒಳಪಂಗಡಗಳೂ ಏಕೆ ಉಳಿದಿವೆ? ಒಂದೇ ಜಾತಿಯ ಒಳಪಂಗಡಗಳು ತಮ್ಮತಮ್ಮಲ್ಲಿಯೇ ಅನ್ನ-ಕನ್ಯಾವ್ಯವಹಾರವನ್ನು ನಿಷೇಧಿಸಿರುವುದೇಕೆ ? ಅವರವರಲ್ಲಿಯೇ ಮೇಲುಕೀಳುಗಳನ್ನು ಬಳಸುತ್ತಿರುವುದೇಕೆ ?

ಚತುರ್ವರ್ಣೀಯರಲ್ಲಿಯೇ ಈ ಅವ್ಯವಸ್ಥೆ ತಾಂಡವವಾಡುತ್ತಿರುವಾಗ, ಅಂದಿನಿಂದಲೂ ಇಂದಿನವರೆಗೆ— ಸುಮಾರು ೨॥ ಸಾವಿರ ವರುಷ— ಅಸ್ಪೃಶ್ಯರು ಅಸ್ಪೃಶ್ಯರಾಗಿಯೇ ಉಳಿದರೇಕೆ, ಎಂದು ಕೇಳಬೇಕಾಗಿಯೇ ಇಲ್ಲ.

ಶ್ರೀ ಬಸವಣ್ಣನವರು ಜಾತೀಯತೆಯ ಜಂಭವನ್ನು ಮುರಿಯುವ ಕ್ರಾಂತಿಯನ್ನು ಹೂಡಿದರು; ಹಲಕೆಲವರು ಅಸ್ಪೃಶ್ಯರನ್ನು ಉದ್ಧರಿಸುವ ಮಹಾಕಾರ್ಯವನ್ನು ಮಾಡಿದರು. ಆದರೆ, ಅಂದಿನಿಂದ ಇಂದಿಗೂ ಅಸ್ಪೃಶ್ಯರ ಗುಂಪು ಕಣ್ಣಿದಿರು ಕಾಣುತ್ತಿದೆ; ಸಮಾಜಬಾಹಿರವಾಗಿ ಪಡಬಾರದ ಕಷ್ಟಗಳನ್ನು ಪಡುತ್ತಿದೆ. ಇದೂ ಹೋಗಲಿ. ಬಸವಣ್ಣನವರನ್ನು ದೇವರಂತೆ ಆರಾಧಿಸುವ ವೀರಶೈವ ಒಳಪಂಗಡಗಳಲ್ಲಿಯಾದರೂ ಸಾಮರಸ್ಯವಿದೆಯೇ ?

ಒಂದೊಂದೇ ಜಾತಿಯಲ್ಲಿಯೇ ಇಷ್ಟೊಂದು ಅನವಸ್ಥೆಯಿರುವಾಗ ಅಸ್ಪೃಶ್ಯರನ್ನು ಆದರಿಸುವ ವಿಷಯ ದೂರವೇ ಉಳಿದೀತು, ಉಳಿಯುತ್ತಿದೆ.

ಈ ವಿವರಣೆಯಿಂದ, ಜೈನಬೌದ್ಧ ಧರ್ಮತತ್ತ್ವವನ್ನಾಗಲಿ ಬಸವಣ್ಣನವರ ಕ್ರಾಂತಿ ತತ್ತ್ವವನ್ನಾಗಲಿ ಹೀಗಳೆಯಬೇಕೆಂದು ನನ್ನ ಉದ್ದೇಶವಲ್ಲ. ಜಾತೀಯ ಭೂತದ ಬಲಾಢ್ಯತೆಯ ಕಲ್ಪನೆಯನ್ನು ಕೊಡುವುದಿಷ್ಟೇ ಈ ವಾದದ ಸಾರ.

# XIX

ಜಾತಿಯ ಜಂಭದ ಕೋಳಿ ಜಗಜ್ಜೇತೃವಾದ ಕಾಮನನ್ನು ಕೂಡ ಕ್ಷುದ್ರ ಕೀಟಕದಂತೆ ಕಾಣುತ್ತಿದೆ, ಎಂದು ಹೇಳಿದರೆ ಯಾರೂ ಬೆರಗಾಗ-ಬೇಕಾಗಿಲ್ಲ. ದಾಂಪತ್ಯಧರ್ಮಕ್ಕಾಗಿ ಹೆಣ್ಣುಗಂಡುಗಳನ್ನು ಹುರಿಗೊಳಿಸಲು ಹೂಬಾಣಗಳನ್ನು ಹೂಡುವ ಮೊದಲು, ಅವೆರಡೂ ಸಜಾತೀಯವೇ ಎಂಬು ದನ್ನು ನೋಡಬೇಕಾಗುತ್ತಿದೆ ಕಾಮ. ವಿಜಾತೀಯ ಯುವಕ ಯುವತಿಯರಿಗೆ ಗುರಿಯಿಟ್ಟನೋ— ದಾಂಪತ್ಯ ವಿಚ್ಛೇದನ ಇಲ್ಲವೆ ವಿಘಟನೆಗಳೇ ಅವನ ಸಾಹಸಕ್ಕೆ ಸಿಕ್ಕುವ ಫಲ.

ವಿಶ್ವವಿಜೇತನಿಗೇ ಈ ಗತಿಯಾದ ಮೇಲೆ, ಜಾತೀಯ ಐಕ್ಯವನ್ನು ಸಾಧಿಸಬೇಕೆನುವುದು ಮಾನವನ ಹುಚ್ಚು ಹಂಬಲು ಎಂಬ ನಿರ್ಣಯಕ್ಕೆ ಬರಬೇಕಾಗುತ್ತಿದೆ.

ಇಷ್ಟು ಮಾತ್ರಕ್ಕೇ ಜಾತಿಭೂತದ ಇದಿರು ಎಲ್ಲರೂ ತಲೆ ತಗ್ಗಿಸಿದ್ದಾರೆಂದು ತಿಳಿಯಬೇಕಾಗಿಲ್ಲ. 'ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯಮಾನಾಃ ಪ್ರಾರಬ್ಧಮುತ್ತಮಜನಾ ನ ಪರಿತ್ಯಜಂತಿ' ಎಂಬುದಕ್ಕೆ ಉದಾಹರಣವಾಗಿ, ಮಹಾತ್ಮರು ಕಾಲಕಾಲಕ್ಕೆ ಉದಿಸುತ್ತಾರೆ; ಸಮಾಜ ಸಾಮರಸ್ಯವನ್ನು ಸೃಷ್ಟಿಸಲು ಸಾಹಸ ಮಾಡುತ್ತಾರೆ.

ಹಿಂದಾದುದು ಹೇಗೇ ಇರಲಿ. ಇಂದಿನ ಮನ್ವಂತರದಲ್ಲಿ ಭಾರತ ರಾಷ್ಟ್ರನಾಯಕರು ಜಾತೀಯ ಐಕ್ಯಕ್ಕಾಗಿ ಪ್ರಯತ್ನಿಸಿದ್ದಾರೆ. ಹೊಸತಿಲ ಒಳಗಿನ ಕುಲಾಚಾರ ಯಾವುದೇ ಇರಲಿ; ಅದನ್ನೇ ಅವರವರು ಆಚರಿಸುತ್ತಲೂ ಇರಲಿ; ಬೀದಿಗೆ ಬಂದಮೇಲೆ ಮಾತ್ರ— ಭಾರತೀಯರೆಲ್ಲ ಒಂದು— ಎಂಬ ತಿಳಿವಳಿಕೆಯನ್ನು ತಂದುಕೊಟ್ಟರು. ಈ ಸಾಹಸ ಪ್ರಯತ್ನಗಳ ಫಲವಾಗಿ ಭಾರತ ಸ್ವತಂತ್ರವಾಗಿದೆ, ಎಂಬುದನ್ನು ಮತ್ತೆ ಮತ್ತೆ ಹೇಳುವ ಆವಶ್ಯಕತೆಯಿಲ್ಲ.

ಮಹಾತ್ಮಾ ಗಾಂಧಿ ಅವರು ಮತ್ತಷ್ಟು ಮುಂದುವರಿದು ಸಮಾಜ ಸಾಮರಸ್ಯ ಕ್ಷೇತ್ರದಲ್ಲಿ ಹರಿಜನೋದ್ಧಾರವನ್ನೂ ಸೇರಿಸಿಕೊಂಡರು.

ಪ್ರಸಂಗವೆನಿಸಬಹುದು; ಕರ್ತವ್ಯನಿಷ್ಠ ಕಣ್ಣುಗಳಿಗೆಮಾತ್ರ ಕ್ಷಮ್ಯವಾಗಿಯೇ ಕಾಣುವುದು, ಸೀತಕ್ಕನ ಸತ್ಯನಿಷ್ಠ ವರ್ತನೆ. ಖಲನಾಯಕನ ವಿಷಯದಲ್ಲಿ ವಜ್ರಾದಪಿ ಕಠೋರಳಾಗಿ ಕಂಡರೂ ದೀನದಲಿತ ಹರಿಜನರ ಬಗೆಗೆ ಕುಸುಮಾದಪಿ ಮೃದುವಾಗಿದ್ದಾಳೆ, ಎಂಬುದನ್ನು ಗಮನಿಸಬೇಕು. ಹರಿಜನೋದ್ಧಾರ ಕಾರ್ಯದಲ್ಲಿ ಆಕೆಯ ತಾಯ್ತನದ ಕರುಳ ಕೊರೆತವನ್ನು ಕಾಣಬಹುದು.

ಹನುಮಂತಪ್ಪನ ಪಾತ್ರ ಹರಿಜನೋದ್ಧಾರಕ್ಕೆ ಮಾದರಿಯ ಮೂರ್ತಿ. ಆ ಪಾತ್ರದ ಮಟ್ಟಕ್ಕೆ ಹರಿಜನರು ಮುಟ್ಟಿದಾಗಲೇ ನಿಜವಾದ ಹರಿಜನೋದ್ಧಾರವಾದಂತೆ. ಹರಿಜನರೆಲ್ಲರೂ ಈ ಮಟ್ಟವನ್ನು ಮುಟ್ಟುವಂತೆ ಈ ನಾಟಕದಲ್ಲಿ ಬೀಜಗಳನ್ನು ಬಿತ್ತಲಾಗಿದೆ.

**ಭಾಷೆ :** ನಾಟಕದ ಭಾಷೆ ಜನಸಾಮಾನ್ಯರ ತಿಳಿವಳಿಕೆಯ ಅಳವಿನಲ್ಲಿಯೇ ಇರಬೇಕೆಂದು ನನ್ನ ಭಾವನೆ. ಗಹನ ವಿಚಾರ ವಿಮರ್ಶೆಯಲ್ಲಿ ತುಸುಮಟ್ಟಿಗೆ ಮೇಲ್ಮಟ್ಟಕ್ಕೆ ಹೋಗಬಹುದು. ಆದರೂ ಎಲ್ಲ ಪಾತ್ರಗಳ ಸ್ವಾಭಾವಿಕ ಬಳಕೆಯ ಭಾಷೆಯನ್ನು ಬಿಟ್ಟು ದೂರ ಹೋಗದಂತೆ ಎಚ್ಚರಿಕೆಯನ್ನು ವಹಿಸಿರುವೆ. ಈ ಪಾಕದ ಪಕ್ವಾಪಕ್ವತೆಗಳನ್ನು ರಸಜ್ಞರೇ ಹೇಳಬೇಕು.

**ನಿರೂಪಣ :** ಕಥಾವಸ್ತು ಅತ್ಯಲ್ಪ. ಪ್ರಚಾರಾತ್ಮಕ ತತ್ತ್ವಗಳ ಚರ್ಚೆಯ ಮೂಲಕ ನಾಟಕ ಮುಂದುವರಿದಿದೆ, ಸಾಧ್ಯವಿದ್ದಮಟ್ಟಿಗೂ ಸರಳವಾಗಿಯೇ ಸಾಗಿಸಲಾಗಿದೆ. ತತ್ತ್ವಚರ್ಚೆಯಲ್ಲಿ ಉದ್ದುದ್ದ ಉಪನ್ಯಾಸಗಳು ಅನಿವಾರ್ಯವೆನಿಸಿದರೂ ನಾಟಕೀಯ ಸಂಭಾಷಣದ ಅಳತೆಯನ್ನು ಮೀರಗೊಟ್ಟಿಲ್ಲ. ಭಾವನೆಯ ಭರದಲ್ಲಿ ಹತ್ತೆಂಟು ಮಾತುಗಳು ಸ್ವಲ್ಪ ಲಂಬಿಸಿರಬಹುದು. ವಿಷಯ ಪರಿಪೋಷಣೆಗಾಗಿ ಆದ ಬೆಳವಣಿಗೆ ಬೇಸರವೆನಿಸುವಂತಿಲ್ಲ, ಎಂದು ನಂಬಿರುವೆ.

ಪಿತಾಪುತ್ರರ ಸಮ್ಮಿಲನದ ಸನ್ನಿವೇಶವನ್ನು ಬಹಳ ಸಂಯಮದಿಂದ ಬರೆಯಬೇಕಾಯಿತು. ಸ್ವಲ್ಪವೇ ಲಕ್ಷ್ಯ ತಪ್ಪಿದ್ದರೂ 'ಪುತ್ರಪ್ರೇಮಕ್ಕಾಗಿ ತಂದೆ ಮಗನನ್ನು ಅಪ್ಪಿಕೊಂಡ' ಎಂಬ ಭಾವನೆ ಪ್ರೇಕ್ಷಕರಲ್ಲಿ ಹುಟ್ಟು

ವಂತಿತ್ತು. ಇದರಿಂದ, ಮಾಧವರಾಯನ ಸತ್ಯನಿಷ್ಠ ಸುಧಾರಣೆ ತಲೆಕೆಳ ಗಾಗುತ್ತಿತ್ತು. ಈ ಮಾತನ್ನು ಶ್ರೀನಿವಾಸರಾಯನ ಬಾಯಿಂದಲೆ ಆಡಿ ಸಿರುವೆ. ಈ ಸನ್ನಿವೇಶವನ್ನು ಕುರಿತು ವರಕವಿ ಬೇಂದ್ರೆಯವರು ತಮ್ಮ ಪ್ರಸ್ತಾವನೆಯಲ್ಲಿ— ಸಮಾಜ ಸಾಮಾರಸ್ಯವನ್ನಂತೂ ಜೋಕೆ ತೂಕಗಳಿಂದ ದಂಡೆಗೆ ಮುಟ್ಟಿಸಿದ್ದಾರೆ—ಎಂದು ಬರೆದುದನ್ನು ತಮ್ಮೆಲ್ಲರ ಗಮನಕ್ಕೆ ತರಬಯಸುತ್ತೇನೆ.

ಮಂದಿರ ಪ್ರವೇಶದ ಬಗೆಗೆ ನನಗಿರುವ ಉಚ್ಚಕಲ್ಪನೆಗಳ ಆದರ್ಶ ವನ್ನು ನಾಟಕದಲ್ಲಿ ಯಥಾ ಪ್ರಸಂಗವಾಗಿ ಭವ್ಯವಾಗಿ ಸಾಧಿಸಿದೆ.

**ರಸಸೃಷ್ಟಿ :** ನಾಟಕ ಜನಮನೋರಂಜಕವಾಗಬೇಕಾದರೆ ಶೃಂಗಾರ, ಕರುಣ, ಹಾಸ್ಯರಸಗಳು ಅನಿವಾರ್ಯ, ಅತ್ಯವಶ್ಯ. ಕೇವಲ ತತ್ತ್ವನಿಷ್ಠ ಪ್ರಚಾ ರಾತ್ಮಕ ನಾಟಕವಾಗಿದ್ದರೂ ನೀರಸವಾಗದಂತೆ ಕರುಣ-ಶೃಂಗಾರ ರಸಗಳನ್ನು ಯಥಾಸಮಯವಾಗಿ ಸೇರಿಸಿದೆ.

ಹಾಸ್ಯಕ್ಕಾಗಿ ಬೇರೆ ಪಾತ್ರ-ಸನ್ನಿವೇಶಗಳನ್ನು ಸೃಷ್ಟಿಸುವುದು ಸಾಮಾನ್ಯವಾಗಿ ಕನ್ನಡ ರಂಗಭೂಮಿಯ-ಅಥವಾ ಪ್ರಾಚೀನ ಭಾರತೀಯ ನಾಟಕಗಳ— ಪರಿಪಾಠ. ಪ್ರಕೃತ ನಾಟಕದಲ್ಲಿ ಆ ಪರಿಪಾಠವನ್ನು ಬಿಟ್ಟು ಅಥದಿಂದ ಇತಿಯ ವರೆಗೂ ಅಷ್ಟಷ್ಟಕ್ಕೇ ಪ್ರೇಕ್ಷಕರ-ಓದುಗರ-ಮನಸ್ಸು ಹಗುರಾಗುವಂತೆ (Recreation) ಹಾಸ್ಯದ ಚುಟಿಕೆಗಳನ್ನು ಹಾರಿಸಿದೆ. ಶಬ್ದಚ್ಛಲ ಅಥವಾ ಪದರು ನುಡಿ (Puns) ಗಳನ್ನು ಹಾಸ್ಯಕ್ಕಾಗಿ ಹೊಂದಿಸಿರುವ ರೀತಿಯನ್ನು ನೋಡಬಹುದು.

**ಸನ್ನಿವೇಶಗಳು :** ರಂಗಭೂಮಿಯ ಮೇಲೆ ಅಭಿನಯಿಸುವಾಗ ಒಂದು ನಿಮಿಷವೂ ವಿಲಂಬವಾಗದ ಹಾಗೆ ಪಾತ್ರ ಪ್ರವೇಶಕ್ಕೆ ಅನುಕೂಲ ವಾಗುವಂತೆ ಸನ್ನಿವೇಶಗಳ ಅನುಸ್ಯೂತತೆ (Continuity) ಯಿರುವುದು ಈ ನಾಟಕದ ವೈಶಿಷ್ಟ್ಯ. ಪ್ರಯೋಗ ಸಮಯದಲ್ಲಿ ಈ ಮಾತಿನ ಅನುಭವ ಬರುವುದು.

ಒಟ್ಟಾರೆ, ಪ್ರಚಾರಾತ್ಮಕ ನಾಟಕವನ್ನು ಕಲಾತ್ಮಕ ರೀತಿಯಲ್ಲಿ ಹೆಣೆಯಲು ಪ್ರಯತ್ನಿಸಿದೆ. 'ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಮ್' ಎಂಬ ಕವಿಕುಲಗುರುವಿನ ವಚನವನ್ನು ಸತ್ಯವನ್ನಾಗಿಸಲು ನನಗಿರುವ ಬುದ್ಧಿಶಕ್ತಿ-ನಾಟಕೀಯ ಅನುಭವಗಳನ್ನು ಸಮಾಜ—ಸಾಮರಸ್ಯ ನಾಟಕದಲ್ಲಿ ರೂಪುಗೊಳಿಸಿರುವೆ. ಇದು ಸಹೃದಯರ ಮೆಚ್ಚುಗೆಗೆ ಪಾತ್ರವಾದೀತೆಂಬ ಭರವಸೆಯಿದೆ.

ಅಸ್ಪೃಶ್ಯತಾ ನಿವಾರಣಾ ನಾಟಕ ಸ್ಪರ್ಧೆಯಲ್ಲಿ ಈ ನಾಟಕವನ್ನು ಸಂಭಾವನೆಕೊಟ್ಟು ಸನ್ಮಾನಿಸಿದುದಕ್ಕಾಗಿ ಮುಂಬಯಿರಾಜ್ಯ ಸರಕಾರಕ್ಕೆ ಕೃತಜ್ಞತೆಗಳನ್ನು ಸಲ್ಲಿಸುವೆ.

## ೨ ಪುನರ್ಜನ್ಮ

ಪುನರ್ಜನ್ಮ ಪಾನಪ್ರತಿಬಂಧವನ್ನು ಕುರಿತ ಏಕಾಂಕ ನಾಟಕ. ಪಾನ ಪ್ರತಿಬಂಧ ಸಮಸ್ಯೆಯನ್ನು ಬಿಡಿಸುವುದು ಸುಲಭ ಸಾಧ್ಯವಲ್ಲ. ಭಾರತ ಸರಕಾರವೂ ರಾಜ್ಯಸರಕಾರಗಳೂ ಪಾನಪ್ರತಿಬಂಧವನ್ನು ಯಶಸ್ವಿಯಾಗಿಸಲು ಸರ್ವಾತ್ಮನಾ ಪ್ರಯತ್ನಿಸುತ್ತಿವೆ. ಆದರೆ ಈ ಪ್ರಯತ್ನ ಯಶಸ್ವಿಯಾಗಿಲ್ಲವೆಂದು ಕಾಂಗ್ರೆಸನ್ನುಳಿದ ಎಲ್ಲ ಪಕ್ಷಗಳೂ ಸಾರುತ್ತಿವೆ. ಈ ಮಾತುಗಳೂ ಸಂಪೂರ್ಣ ವ್ಯರ್ಥವಲ್ಲ. ಸರಕಾರ ಎಷ್ಟೇ ಬಲವಾದ ಕಾವಲನ್ನಿಟ್ಟಿದ್ದರೂ ಮದ್ಯಪಾನದ ಅಪರಾಧದ ವಿವರಗಳು ಪತ್ರಿಕೆಗಳಲ್ಲಿ ಎಡೆಬಿಡದೆ ಬಂದೇ ಬರುತ್ತಲಿವೆ.

ಇಷ್ಟು ಮಾತ್ರಕ್ಕೆ ತತ್ತ್ವವೇ ತಪ್ಪೆಂದು ಅರ್ಥವಾಗುವುದಿಲ್ಲ. ಪಾನಪ್ರತಿಬಂಧ ಕಾರ್ಯದಲ್ಲಿ ನಿಯೋಜಿಸಲ್ಪಟ್ಟ ಕಾರ್ಯಕರ್ತರು ದಕ್ಷತೆಯಿಂದ ದುಡಿದರೆ ಸರಕಾರಗಳ ಇಚ್ಛೆ ಈಡೇರುವುದರಲ್ಲಿ ಸಂಶಯವಿಲ್ಲ.

ಅರ್ಧಗಂಟೆಯಲ್ಲಿ ಅಭಿನಯಿಸಬಹುದಾದ ಈ ಪುಟ್ಟ ನಾಟಕದಲ್ಲಿ ಪಾನಪ್ರತಿಬಂಧ ಸಮಸ್ಯೆಯನ್ನು ಸವಿವರವಾಗಿ ಚರ್ಚಿಸುವುದು—ಕರಟದಿಂದ ಕಡಲನ್ನು ಅಳೆಯ ಹೋದಂತೆ—ಎಂಬ ಅರಿವು ನನಗಿದೆ. ಆದರೂ ಸರಕಾರದ ಸೇತುಬಂಧನ ಕಾರ್ಯದಲ್ಲಿ ನನ್ನದೂ ಒಂದು, 'ಅಳಿಲುಸೇವೆ'

ಎಂಬ ಭಾವನಾಪ್ರೇರಿತನಾಗಿ ಪುನರ್ಜನ್ಮ ಲಘುನಾಟಕೆಯನ್ನು ಬರೆದಿರುವೆ. ಇದು ತತ್ಕಾಲದ ಮಟ್ಟಿಗಾದರೂ ಸಹೃದಯರಿಗೆ ಸಂವೇದ್ಯವಾಗುವ ಸನ್ನಿವೇಶವನ್ನೊಳಗೊಂಡಿದೆ, ಎಂದು ಬಗೆದಿರುವೆ. ಈ ಮಾತಿನಿಂದ ನನ್ನ ಮೇಲೆ ಆತ್ಮ ಶ್ಲಾಘನೆಯ ಆರೋಪಮಾಡಲಿಕ್ಕಿಲ್ಲವಷ್ಟೇ.

ಈ ನಾಟಕಕ್ಕೆ ಪಾನಪ್ರತಿಬಂಧ ನಾಟಕ ಸ್ಪರ್ಧೆಯಲ್ಲಿ ಬಹುಮಾನ ವನ್ನಿತ್ತ ಹುಬ್ಬಳ್ಳಿ ಪಾನಪ್ರತಿಬಂಧ ಸಮಿತಿಯವರಿಗೆ ವಂದನೆಗಳು.

## ೩ ರಣದೇವತೆಯ ರಂಗಪಂಚಮಿ

ರಣದೇವತೆಯ ರಂಗಪಂಚಮಿ **ಕರ್ಣನ ಚರಿತ್ರೆಯನ್ನು** ಕುರಿತ ನಾಟಕ. ಭಾರತದ ಕತೆಯನ್ನು ಅರಿಯದವರೇ ಇಲ್ಲ. ಇಂತಹ ಚಿರಪರಿ ಚಿತ ವಸ್ತುವನ್ನು ಆಯ್ದುಕೊಳ್ಳುವುದರಲ್ಲಿ ನನ್ನದೊಂದು ಉದ್ದೇಶವಿದೆ. ಈ ಲಘುನಾಟಿಕೆ ಸಮಾಜ ಸಾಮರಸ್ಯದ ಪೂರಕ ಉದಾಹರಣ. ಜಾತೀ ಯತೆಯ ದುರಭಿಮಾನದ ದಳ್ಳುರಿಯಲ್ಲಿ ಕರ್ಣನಂತಹ ವೀರರತ್ನವೂ ಸುಟ್ಟು ಇದ್ದಲಿಯ ಬೆಲೆಗೆ ಇಳಿಯಬೇಕಾಯಿತಲ್ಲ, ಎಂದು ನನ್ನ ಕೊರಗು. ಆ ರತ್ನವನ್ನು ಹಾಗೆಯೇ ಬೆಳಗಗೊಟ್ಟಿದ್ದರೆ, ಭಾರತಚರಿತ್ರದ ಮೇಲೆ ಎಂತಹ ದಿವ್ಯ ಪ್ರಕಾಶಬೀಳುತ್ತಿದ್ದಿತೋ! ಈ ಕಾರಣದಿಂದಲೇ ಆದಿಪಂಪನಂತಹ ಮಹಾಕವಿಗಳು 'ಕರ್ಣ ರಸಾಯನಮಲ್ತೆ ಭಾರತಂ' ಎಂದು ಎದೆದುಂಬಿ ಹಾಡಬೇಕಾಯಿತು. ಕರ್ಣನ ದುರಂತಕ್ಕಾಗಿ ಮಿದುವೆದೆಯರ ಕರುಳು ಕರಗಿ ಕಣ್ಣೀರು ತುಳುಕಿದರೆಸಾಕು; ನಾಟಕಕಾರ ಬೇಡುವ ನಿಜವಾದ **'ಕಂಕಣ'** ಅದುವೇ.

ವ್ಯಕ್ತಿತ್ವವನ್ನು ಮರೆಯದೆ ಒಡೆಯನ ಹಿತವನ್ನು ಸಾಧಿಸುವ ಕರ್ಣನ ಆತ್ಮಾಭಿಮಾನ; ಶಸ್ತ್ರಾಸ್ತ್ರಗಳ ಸಂವರ್ಧನೆಯಿಂದ ವಿಶ್ವಶಾಂತಿಯನ್ನು ಸಾಧಿಸುತ್ತೇವೆ, ಎನ್ನುವ ಅಮೇರಿಕೆಯ ಅರ್ಥವಿಲ್ಲದ ಅಟ್ಟಹಾಸ; 'ಶಠಂ ಪ್ರತಿ ಸತ್ಯಂ' ಎನ್ನುವ ಮಹಾತ್ಮರ ದಿವ್ಯವಾಣಿ ಈ ಮೂರು ಮಾತುಗಳನ್ನು ಮನಗಾಣಿಸುವುದೇ ಈ ನಾಟಕದ ಉದ್ದೇಶ. ನಾಟಕಕಾರನ ಮನಸ್ಸಿನಲ್ಲಿ ಮೂಡಿದುದು ಕೃತಿಯಲ್ಲಿ ಕಾಣಿಸುತ್ತಿದೆ, ಎಂದು ಅಭಿಜ್ಞರು ಒಪ್ಪುವು

ಡಾದರೆ ನನ್ನ ಶ್ರಮ ಸಾರ್ಥಕ. ಈ ನಾಟಕವನ್ನು ನೋಡುವ ನೋಟಕರೂ ಓದುವ ವಾಚಕರೂ ಜಾತೀಯತೆಯ ಜೊಳ್ಳುತನದ ಬಗೆಗೆ ಮೂಗು ಮುರಿದರೂ ಸಾಕು; ನನ್ನ ಇಚ್ಛೆ ಈಡೇರಿದಂತೆ.

ಮಹಾಶಯರ ಇದಿರಿಗೆ ಬರೆಹಗಾರನ ಬಗೆಯಲ್ಲಿದ್ದುದನ್ನೆಲ್ಲ ಮುಚ್ಚುಮರೆಯಿಲ್ಲದೆ ಬಿಚ್ಚಿ ಇಟ್ಟಿರುವೆ. ನಾಟಕ-ಸಾಹಿತ್ಯ-ಪಾಕವಂತೂ ತಮ್ಮ ವಶವಾಗಿಯೇ ಇದೆ. ಅದರ ಹದವನ್ನು ಹೇಳಬೇಕಾದುದು ಸಹೃದಯರ ರಸಾಘಃ

ನನ್ನ ವಿನಂತಿಯನ್ನು ಮನ್ನಿಸಿ ರಂಗ-ರಂಜನಕ್ಕೆ ವಿಮರ್ಶಾತ್ಮಕ ವಿಶಾಲ ವಿಚಾರ ಮತ್ತು ಜಾಗತಿಕ ಘಟನೆಗಳ ಗೂಢಾನುಭವಗಳಿಂದ ಪೂರ್ಣವಾದ ಪ್ರಸ್ತಾವನೆಯನ್ನು ಬರೆದು ಅನುಗ್ರಹಿಸಿದ ಕನ್ನಡ ನಾಡಿನ **ವರಕವಿ ಬೇಂದ್ರೆ** ಅವರಿಗೆ ಅನಂತ ವಂದನೆಗಳು

ನನ್ನ ಈ ಪುಟ್ಟ ಕೃತಿಯನ್ನು **ಕರ್ನಾಟಕ ಸಹಕಾರಿ ಸಾಹಿತ್ಯ ಸಂಘದ ಮಾನ್ಯ ಸದಸ್ಯರು** ತಮ್ಮ ಪುಸ್ತಕ ಮಾಲೆಯಲ್ಲಿ ಪ್ರೇಮಪೂರ್ವಕವಾಗಿ ಪ್ರಕಟಿಸಿದ್ದಾರೆ. ಅವರೆಲ್ಲರಿಗೆ ನಾನು ಚಿರಋಣಿ.

ಅಲ್ಪಾವಕಾಶದಲ್ಲಿ ಪುಸ್ತಕವನ್ನು ಮುದ್ರಿಸಿದ ರವೀಂದ್ರ ಮುದ್ರಣಾಲಯದ ಒಡೆಯರಿಗೆ ಕೃತಜ್ಞತೆಗಳನ್ನು ಅರ್ಪಿಸುವೆ

**ನಾಟಕಕಾರ**

# ತಪ್ಪು-ತಿದ್ದು

| ಪುಟ | ಸಾಲು | ತಪ್ಪು | ತಿದ್ದು |
|---|---|---|---|
| ೨೬ | ೧೮ | ನರಪಂಚಗೂ | ನರವಂಚರೂ |
| ೨೬ | ೨೦ | ಮಾಂವದಿರು | ಮಾವಂದಿರು |
| ೩೯ | ೧೪ | ಸರಕಾರಕ್ತೆ | ಸರಕಾರಕ್ಕೆ |
| ೩೯ | ೧೮ | ತಿಳೀಲಿಕ್ತಿಲ್ಲ | ತಿಳೀಲಿಕ್ಕಿಲ್ಲ |
| ೪೫ | ೧೮ | ಐಲ್ಲ | ಇಲ್ಲ |
| ೪೮ | ೨೧ | ಓತಣ | ಔತಣ |
| ೫೩ | ೬ | ಕಣ್ಣೊಳಗೆ | ಕಣ್ಣೊಳಗೆ |
| ೫೭ | ೮ | ಹೇಳದ್ದು | ಹೇಳಿದ್ದು |
| ೫೯ | ೧೬ | ಅಸ್ಪೃರನ್ನು | ಅಸ್ಪೃಶ್ಯರನ್ನು |
| ೬೧ | ೧೬ | (ಮಾತೃಪ್ರೇಮದಿಂದ) | (ಪುತ್ರಭಕ್ತಿಯಿಂದ) |
| ೬೭ | ೪ | ಹತಭಾಗಳಿಗೆ | ಹತಭಾಗ್ಯಳಿಗೆ |
| ೭೩ | ೩ | ಲಕ್ಷ್ಮೀದೇವೀ | ಲಕ್ಷ್ಮೀದೇವೀ. |
| ೭೩ | ೯ | ಪ್ರಾಗಳೆಲ್ಲರಲಿ | ಪ್ರಾಣಿಗಳೆಲ್ಲರಲಿ |
| ೮೦ | ೧ | ತೀರಬೇಕಾಗುತ್ತದೆ | ತೀರಬೇಕಾಗುತ್ತ ದೆ |
| ೮೬ | ೨೧ | ಧನ್ವಂತರಿ | ಚರಕಾಚಾರ್ಯ |
| ೯೦ | ೭ | ಬಾರಿ | ಬಾಳಿರಿ |
| ೯೨ | ೧೬ | ಸಾಲೆಗೆ ಬರುತ್ತೇವೆ | ಸಾಲೆ ಗೆಬರುತ್ತೇವೆ |
| ೯೨ | ೨೪ | ಮಾಧವ: (ನಗುತ್ತ) ಅಲ್ಲಪಾ್ವ ಅನಬೇಕು. ಭೀಮಣ್ಣ– ಮುಂದೇ- ನಾಯಿತೆಂದರೆ ಅನಬೇಕು. | ಮಾಧವ:(ನಗುತ್ತ)ಅಲ್ಲ ವಾ... ಅನಬೇಕು. ಭೀಮಣ್ಣ :ಮುಂದೇ- ನಾಯಿತೆಂದರೆ ಅನಬೇಕು |

| | | | |
|---|---|---|---|
| ೧೦೫ | ೯ | ವಯಸ್ಸು ೩೦ | ವಯಸ್ಸು ೪೦ |
| ೧೦೬ | ೨೫ | ಸೇಳಿದಾಟಕ್ಕೆ | ಸುಳಿದಾಟಕ್ಕೆ |
| ೧೧೨ | ೭ | ಗಳ್ಲಿ | ಗಳ್ಲ |
| ೧೧೨ | ೭ | ಬುದಿ | ಬುದ್ಧಿ |
| ೧೧೩ | ೨೩ | ಸುರಾಮರಿಯೇ | ಸುರಾಮಾರಿಯೇ |
| ೧೧೫ | ೬ | ಬೇಕಾದಿತು | ಬೇಕಾದೀತು |
| ೧೨೭ | ೯ | ಭಾತರ | ಭಾರತ |
| ೧೩೧ | ೯ | ಹಿಂದೆಯುವ | ಹಿಂದೆಗೆಯುವ |
| ೧೩೧ | ೨೧ | ನಿಚ್ಚಳ ಕಾಣುಳವಾದ | ನಿಚ್ಚಳವಾಗಿ ಕಾಣುವ |
| ೧೩೩ | ೩ | ಹೆ ಬೀಳಿಡು | ಹೇಳಿಬಿಡು |
| ೧೫೩ | ೧೩ | **ಕೆಣಕಭಹುದಲ್ಲದೆ** | **ಕೆಣಕಬಹುದಲ್ಲದೆ** |
| ೧೫೭ | ೧ | ಎಂದು | ಒಂದು |

---

ತಪ್ಪು–ತಿದ್ದಿನಂತೆ ಪುಸ್ತಕದಲ್ಲಿ ಮೊದಲು ಸರಿಪಡಿಸಿಕೊಂಡು ಬಳಿಕ ಓದುವುದಾಗಬೇಕು. ಅಲ್ಲಲ್ಲಿ ಕಣ್ಣು ತಪ್ಪಿ ಉಳಿದಿರುವ ಮುದ್ರಣ ದೋಷಗಳನ್ನು ವಾಚಕಮಹಾಶಯರು ಸುಲಭವಾಗಿಯೇ ಸರಿಪಡಿಸಿಕೊಳ್ಳಬಲ್ಲರೆಂದು ನಂಬಿರುವೆವು. ಮುಂದಿನ ಮುದ್ರಣದಲ್ಲಿ ಸರ್ವ ಸುವ್ಯವಸ್ಥೆಯನ್ನು ಮಾಡಲಾಗುವುದು.

# ಸಮಾಜ-ಸಾಮರಸ್ಯ

( ನಾಲ್ಕು ಅಂಕಗಳ ಸಾಮಾಜಿಕ ಸಂಗೀತ ನಾಟಕ )

## ನಾಂದೀ

ಪದ ೧. ಉದಯವಾದುದು ನಮ್ಮ ಚೆಲುವ ಕನ್ನಡನಾಡು ।
(ಈ ಪೂರ್ಣ ಪದ್ಯವನ್ನು ತೆರೆ ಸರಿಯುವ ಮೊದಲೇ ಹೇಳಬೇಕು.)

( ತೆರೆ ಸರಿದಮೇಲೆ )

ರಾಗ— ಶಂಕರಾ ತಾಳ— ಏಕತಾಳ

ಶಂಕರ ಸುಜನಾರ್ತಿಹಾರ । ಸಚರಾಚರ ವಿಶ್ವಪೂರ ।
ಕಿಂಕರಗಣ ಕಾಮಸಾರ । ಪಾಹಿ ಪಾಹಿ ಪ್ರೇಮಧಾರ ॥ ಪಲ್ಲ ॥

ಜಾತಿ ಜಾತಿ ವೈರವಳಿದು । ಪ್ರೀತಿಭಾವ ಮೊಳಕೆ ತಳೆದು ।
ಶಾಂತಿ ಸೌಖ್ಯ ಭರದೆ ಬೆಳೆದು । ನಲಿಯುತಿರಲಿ ಜನತೆ ಸದಾ ॥ ೧ ॥

## ೧ನೆಯ ಅಂಕ

### ಪ್ರವೇಶ ೧

**ಸನ್ನಿವೇಶ-ಸ್ಥಳ :** ಹರಿಜನಕೇರಿಯ ದುರ್ಗಾದೇವಿಯ ಗುಡಿಯ ಬಯಲು. ದೇವಸ್ಥಾನ ಕಾಣುವುದಿಲ್ಲ. ರಂಗದ ಮೇಲೆ ಧ್ವಜವಂದನೆಯ ಸಿದ್ಧತೆ—ಧ್ವಜಸ್ತಂಭ, ಗೆರೆಗಳು, ಖುರ್ಚಿಯ ಮೇಲೆ ಮಾಲಾಲಂಕೃತ ಮಹಾತ್ಮಾಜಿಯ ಫೋಟೋ, ಮತ್ತೊಂದು ತೆರವಾದ ಖುರ್ಚಿ.

**ಸಮಯ :** ಅಕ್ಟೋಬರ ೨ನೆಯ ದಿನಾಂಕ, ಗಾಂಧಿ ಜಯಂತಿಯ ನಿಮಿತ್ತ ಬೆಳಗಿನ ೭ ಗಂಟೆಗೆ ಧ್ವಜಾರೋಪಣ ಸಿದ್ಧತೆ.

ಪಾತ್ರಗಳು : ಮಾಧವರಾಯ, ಹನುಮಂತಪ್ಪ ಮತ್ತು ಮೂರು ನಾಲ್ಕು ಜನ ಸ್ವಯಂಸೇವಕರು; ಎಲ್ಲರೂ ಖಾದಿ ಉಡುಪಿನಲ್ಲಿ. ಹೆಣ್ಣು ಗಂಡು ಹರಿ ಜನರ ಗುಂಪು ಯಥಾ ಪ್ರಕಾರ ಅಸ್ವಚ್ಛ ವೇಷದಲ್ಲಿ.

ಮಾಧವ : ಹಾಽಽಂ, ಎಲ್ಲರೂ ಗೆರೆಗುಂಟ ನಿಲ್ಲಿರಿ. (ನಿಂತ ಮೇಲೆ) ಇನ್ನು ಧ್ವಜವಂದನೆ. ನಿಮ್ಮ ಇದಿರಿಗೆ ಈ ನಿಶಾನೆ ಕಾಣತದಲ್ಲ—ಅದು ನಮ್ಮ ಭಾರತಮಾತೆ, ರಾಷ್ಟ್ರ ದೇವತೆ; ಅದಕ್ಕೆ ನಾವೆಲ್ಲರೂ ನಮಸ್ಕಾರ ಮಾಡೋಣ.

ಒಬ್ಬ ಹರಿಜನ : ಇಲ್ಲೇ ನಿಂತಲ್ಲೇ ಕೈ ಮುಗೂತೇವ್ರಿಽ ?

ಮಾಧು : ಸ್ವಲ್ಪ ತಡೆಯಿರಿ. ಆ ನಮಸ್ಕಾರದ ರೀತಿಯನ್ನು ನಾನು ನಿಮಗೆ ಹೇಳತೇನಿ. ಇರಲಿ. ನಿಮ್ಮ ಕೇರಿಯೊಳಗ ಹಿರೇ ಮನುಷ್ಯ ಅಂತ ಯಾರನ್ನ ಮಾಡಿಕೊಂಡೀರಿ ?

ಒಬ್ಬ ಹರಿಜನ : ಮ್ಯಾಗೇರಿ ಮರಿಯಾ ಅದಾನಲ್ರೀಽ ಮುದುಕಽಽಽ.

ಮಾಧು : ಹಿರೇ ಮನುಷ್ಯ ಅಂದಮೇಲೆ, ಅವನಿಗೆ ಮರಿಯಪ್ಪ ಅನ್ನಬೇಕು. ಮರಿಯಪ್ಪ, ಬಾ ಇಲ್ಲಿ ನನ್ನ ಹತ್ತರ.

ಮರಿಯಪ್ಪ : ಬ್ಯಾಡ್ ಬಿಡ್ರಿ ತಂದೇ; ಇಲ್ಲೇ ಇರತೇನಿ. ಹೇಳ್ರಿ ಏನಾರೆ ಇದ್ರೆ.

ಮಾಧು : ಶ್ಯಾಮಣ್ಣಾ, ಹೋಗು ಕರಕೊಂಡು ಬಾ ಆತನ್ನಽಽ. (ಶ್ಯಾಮ ಮರಿಯಪ್ಪನ ಹತ್ತಿರ ಹೋಗುವ.)

ಮರಿಯಪ್ಪ : (ಹಿಂದೆ ಸರಿಯುತ್ತ) ಛೆ ಛೇಽಽ ಮುಟ್ಟ ಬ್ಯಾಡ್ರೀ ಯಪಾಽ, ನಾವು ಮಾದರುಽಽಽ.

ಮಾಧು : ನೀವು ಮಾದರು ಅಂತಲೇ ಮುಟ್ಟೋದಕ್ಕೆ ಬಂದಾನ. ಮಾದಿಗರು ಅಂದರೆ ಮನುಷ್ಯರಲ್ಲ ಅಂತ ತಿಳಿದೀಯೇನು ? ಶ್ಯಾಮಣ್ಣಾ, ಕೈಹಿಡಿದು ಕರಕೊಂಡು ಬಾ ಅವನ್ನಽಽ. (ಶ್ಯಾಮ ಮರಿಯಪ್ಪನನ್ನು ಕೈಹಿಡಿದು ಕರೆತರುವ.) ಬಾ, ಮರಿಯಪ್ಪಾ ಇಲ್ಲಿ ನಿಲ್ಲು. (ನಿಂತ ಮೇಲೆ ಉಳಿದವರನ್ನು ಉದ್ದೇಶಿಸಿ) ಇನ್ನು ನೀವೆಲ್ಲರೂ ಈ ಸ್ವಯಂಸೇವಕರು

ಹೇಳಿದಂತೆ ಮತ್ತು ಮಾಡಿದಂತೆ ಮಾಡಬೇಕು. ತಿಳೀತಿಲ್ಲೋ ? (ಧ್ವಜ ವಂದನೆಯ ಯಥಾವಿಧಿ ಕಾರ್ಯಕ್ರಮಃ ಮರಿಯಪ್ಪನ ಹಸ್ತದಿಂದ ಧ್ವಜಾರೋಪಣ ಮತ್ತು ಸ್ವಯಂಸೇವಕರಿಂದ ವಂದೇ ಮಾತರಂ ಗೀತ ನಡೆದು ಮುಗಿಯುವುವು.)

ಇನ್ನು ಮೇಲೆ ನಾನು ನಿಮಗೆ ಕೆಲವು ಮಾತುಗಳನ್ನು ಹೇಳತೇನಿ. ಎಲ್ಲರೂ ಅಲ್ಲಿಂದಲ್ಲಿಯೇ ಕೂತುಕೊಳ್ಳಿರಿ. ಮರಿಯಪ್ಪಾ, ನೀನು ಈ ಖುರ್ಚಿಯ ಮೇಲೆ ಕೂಡ್ರು.

**ಮರಿಯಪ್ಪ :** (ಬೆರಗಿನಿಂದ ನೋಡುತ್ತ) ಯಪ್ಪಾಽಽ ನೀ-ವಿ-ರ್ತಾಽಽ?

**ಮಾಧು :** ಕುರ್ಚೀದ ಮೇಲೆ ಕೂತು ಅರ್ಜಿ ಬರೆಯೋ ಕಾಲ ಹಿಂದಾತು; ಈಗ ಕುರ್ಚಿಗಿ ತಗೊಂಡು ಕಳೆ ತೆಗೆಯೋದಕ್ಕ ಹೋಗೋ ಕಾಲ ಬಂದಽದ. ಇರಲಿ. ತಡ ಮಾಡಬ್ಯಾಡ. ಕೂತುಕೋ. (ಮರಿಯಪ್ಪನನ್ನು ತಾನೇ ಕುರ್ಚಿಯ ಮೇಲೆ ಕುಳ್ಳಿರಿಸಿ) ಈಗ ಈ ಸಭಾಕ್ಕಽ ನೀನೇ ಹಿರಿಯ—ಅಂದರೆ ಅಧ್ಯಕ್ಷ. ನಿನ್ನ ಒಪ್ಪಿಗೆಯಿಂದ ನಾನು ನಾಲ್ಕು ಮಾತು ಹೇಳತೇನಿ.

**ಮರಿಯಪ್ಪ :** (ನಾಚಿದಂತೆ) ನಾ ಅದ್ದೆಕ್ಸರೀಽಽ ? ನನಗೇನು ಬುದ್ಧಿ ಐತ್ರಿಽ ?

**ಮಾಧು :** (ನಗುತ್ತ) ಅಧ್ಯಕ್ಷ ಆದವರೂ ಇದನ್ನೇ ಮಾತಾಡೋದು. ಕೂತುಕೋ. ಹರಿಜನ ಬಾಂಧವರೇ, ಈ ದಿವಸ ಇಡೀ ಭಾರತಕ್ಕೇ ದೊಡ್ಡ ಹಬ್ಬ. ಈ ಹಬ್ಬದ ಹೆಸರು ಗೊತ್ತದೆ ಏನು ನಿಮಗೆ ? (ಮಹಾತ್ಮರ ಫೋಟೋ ಕಡೆಗೆ ಬೆರಳು ಮಾಡುತ್ತ) ಆ ಕುರ್ಚಿ ಮೇಲಿನ ಫೋಟೋದಲ್ಲಿ ಯಾರಿದ್ದಾರೆ ?

**ಒಬ್ಬ ಹರಿಜನ :** ಮಾತಮಾ ಗಾಂದಿ ಅವರು.

**ಮಾಧು :** ಹೌದು. ಅವರು ನಮ್ಮ ದೇಶದ ತಂದೆ, ರಾಷ್ಟ್ರಪಿತ. ಇಂದು ಅಕ್ಟೋಬರ ತಿಂಗಳ ೨ನೆಯ **ದಿನಾಂಕ; ಅವರು ಹುಟ್ಟಿದ ದಿವಸ.** ಅದಕ್ಕೇ ನಮ್ಮ ದೇಶದೊಳಗೆಲ್ಲ ಅವರ ಹುಟ್ಟು ಹಬ್ಬ—**ಗಾಂಧಿ ಜಯಂತಿ !**

**ಹರಿಜನ :** ನಿನ್ನೇ ಹೇಳಾಕಿಲ್ರೇನ್ರಿ ಬ್ಯಾಳ್ಯಾಗ ಬೆಲ್ಲಾ ಒಗೀತಿದ್ವಿ.

**ಮಾಧು :** ನಮ್ಮೆಲ್ಲರ-ನಮ್ಮ ಭಾರತ ರಾಷ್ಟ್ರದ—ತಂದೆ ಮಹಾತ್ಮರ ಹುಟ್ಟುಹಬ್ಬ ಅಂದರೆ ಹುಗ್ಗಿ ಹೋಳಿಗೆ ಹೊಡೆಯೋದಲ್ಲ. ಅವರು ನಮಗೆ ಯಾವ ಯಾವ ಮುಖ್ಯ ಮುಖ್ಯ ಮಾತು, ಯಾವ ಯಾವ ಕಾರ್ಯಕ್ರಮ ಹೇಳಿ ಹೋಗಿದ್ದಾರಲ್ಲ, ಅವುಗಳನ್ನು ನಾವು ಈ ಹೊತ್ತಿನಿಂದಲೇ ಆರಂಭ ಮಾಡಬೇಕು; ಮತ್ತು ದಿನಾಲು ಅದರಂತೆಯೇ ಮಾಡುತಾ ಇರಬೇಕು. ಇಷ್ಟಾದರೆ ಅವರ-ಗಾಂಧಿ-ಜಯಂತಿ ಮಾಡಿದಂತೆ ಆಯ್ತು. ಅದರಿಂದ, ಸ್ವರ್ಗದೊಳಗಿರೋ ಅವರ ಆತ್ಮಕ್ಕೆ ಶಾಂತಿ ಸಿಕ್ಕತದೆ. ಇನ್ನು, ಅವರ ಹೆಸರಿನಿಂದ ನಾವು ಹಬ್ಬಾ ಯಾಕೆ ಮಾಡಬೇಕು ಅನ್ನೋದನ್ನ ನಾ ಹೆಚ್ಚಾಗಿ ಹೇಳಬೇಕಾಗಿಲ್ಲ. ನಮ್ಮ ಭಾರತ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕದ್ದು ಅವರ ತಪಸ್ಸಿನ ಬಲದಿಂದ—ಅವರ ಪುಣ್ಯದ ಬಲದಿಂದ! ತಿಳೀತಿಲ್ಲೋ? ಈಗ ಎಲ್ಲರೂ ಅವರ ಜಯಕಾರ ಮಾಡಿರಿ. ಮಹಾತ್ಮಾ ಗಾಂಧೀ ಕೀ.......

**ಸಮೂಹದಿಂದ :** ಜಯ!

**ಮಾಧವ :** ಭಾರತ ಮಾತಾಕೀ........

**ಸಮೂಹದಿಂದ :** ಜಯ......

**ಮಾಧವ :** ಹರಿಜನೋದ್ಧಾರ......

**ಸ್ವಯಂಸೇವಕರು :** ಜಿಂದಾ ಬಾದ......

**ಮಾಧವ :** ಸಭಾ ಅಂತ ನಾ ಉದ್ದುದ್ದು ಮಾತು ಹೇಳ್ಳಿಕ್ಕೆ ನಿಂತಿಲ್ಲ. ಗಾಂಧಿಜಿ ಅವರಿಗೂ ಬರೇ ಮಾತಾಡೋದು ಬ್ಯಾಡಾಗಿತ್ತು; ಮಾತಿನಂತೆ ಕೆಲಸಾ ಮಾಡೋದು ಬೇಕಾಗಿತ್ತು. ಮಹಾತ್ಮರು ಭಾರತದ ಉದ್ಧಾರದ ಸಲುವಾಗಿ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಟ್ಟಿದ್ದಾರೆ. ಅವುಗಳೊಳಗ ಅತಿ ಮುಖ್ಯವಾದದ್ದು ಅಂದರೆ **ಹರಿಜನರ ಉದ್ಧಾರ.** ಮೊದಲು ನಿಮ್ಮನ್ನು **ಅಸ್ಪೃಶ್ಯರು** ಅಂದರೆ ಮುಟ್ಟಬಾರದವರು ಅಂತ ಕರೀತಿದ್ದರು; ಅದಕ್ಕಾಗೇ ಊರ ಹೊರಗೆ ಇಟ್ಟಿದ್ದರು. ಈಗಲೂ ನಿಮ್ಮ ಕೇರಿ ಊರ ಹೊರಗೇ ಅದ ಅಲ್ಲ?

**ಹರಿಜನ :** ಹೊಲ್ಯಾರು ಅಂದ ಮ್ಯಾಗ ದೂರ ಇರಾಕಬ್ಯಾ ಬೇಕಲ್ರಿ!

**ಮಾಧವ:** ಬಹುಕಾಲ ನಿಮ್ಮನ್ನು ಊರ ಹೊರಗೇ ಇಟ್ಟಿರೋದರಿಂದ, "ನಾವು ಇಲ್ಲೇ ಇರತಕ್ಕವರೇನೋ" ಅನ್ನೋ ತಿಳಿವಳಿಕೆ ಆಗೇದ ನಿಮಗೆ. ಅದು ತಪ್ಪು. ಅಸ್ಪೃಶ್ಯ-ಹೊಲೆಯ ಅನ್ನೋ ಶಬ್ದ ಕೇಳಿದರೆ ಮಹಾತ್ಮಾಜಿ ಕಣ್ಣೊಳಗೆ ನೀರು ತರುತಿದ್ದರು. ಅದಕ್ಕಾಗೇ—**ಅಸ್ಪೃಶ್ಯತಾ ಅನ್ನೋದು ಹಿಂದೂ ಧರ್ಮಕ್ಕೆ ಒಂದು ದೊಡ್ಡ ಕಲಂಕ, ಒಂದು ಮಹಾಶಾಪ; ಮಾದಿಗರನ್ನು ಮುಟ್ಟದೇ ಇರೋದು ಮಹಾಪಾಪ**–ಅಂತ ಹೇಳತಿದ್ದರು. ಈ ಶಾಪ-ಪಾಪಗಳನ್ನು ತಪ್ಪಿಸೋದಕ್ಕೆಂದೇ—ಮೊದಲನೆಯದಾಗಿ ಅಸ್ಪೃಶ್ಯ ಶಬ್ದದ ಬದಲು, **'ಹರಿಜನ'** ಎಂಬ ಪವಿತ್ರ ಹೆಸರಿನಿಂದ ನಿಮ್ಮನ್ನು ಕರೆದರು. ಆ ಮೇಲೆ ಹರಿಜನ ಉದ್ಧಾರ ಮಾಡಬೇಕೂಽಂತ ದೇಶದಲ್ಲೆಲ್ಲ ತಿರುಗಾಡಿದರು; ಜನರ ಮನಸ್ಸಿನಲ್ಲಿ ಹರಿಜನರ ಬಗ್ಗೆ ಪ್ರೇಮ-ಸಹಾನುಭೂತಿಗಳನ್ನು ಹುಟ್ಟಿಸೋದಕ್ಕೆ ಪ್ರಯತ್ನ ಮಾಡಿದರು. ತಾವು ಸ್ವತಃ **ಲಕ್ಷ್ಮೀ ಅನ್ನೋ ಹರಿಜನ ಹುಡುಗೀನ್ನ ಹೊಟ್ಟೆಯ ಮಗಳಂತೆ ಕಾಪಾಡತಿದ್ದರು. ಹರಿಜನರನ್ನು ತಮ್ಮ ಪಂಕ್ತಿಯೊಳಗೇ ಕರಕೊಂಡು ಊಟಽ ಮಾಡತಿದ್ದರು.**

**ಹರಿಜನ:** ಇಲ್ಲೆ ಯಾವದೋ ಊರಿಗೆ ಹೋಗೋ ಮುಂದ ಆ ಮಗಳ್ನ ಕರಕೊಂಡಽ ಬಂದಿದ್ದರಲ್ರಿ ಅವರು !

**ಮಾಧವ:** ಅಂತೂ ಆ ಪುಣ್ಯಮೂರ್ತಿಯ ದರ್ಶನ ಆಗೇದ ಅಂದ್ಹಾಂಗಾತು ನಿಮಗ. ಆಗ ಅವರು ನಿಮಗೂ ಕೆಲವು ಮಾತುಗಳನ್ನು ಹೇಳಿರಬಹುದಲ್ಲ ?

**ಹರಿಜನ :** ಏನೇನೋ ಹೇಳಿದರ್ರೀಽಽ; ತಿಳಿಬೇಕಲ್ರೀ ಅದೆಲ್ಲ ಈ ಮಡ್ಡ ತಲೀಗೆ. ಕಲ್ಲು ಕುಂತ್ಹಾಂಗ ಕುಂತಿದ್ವೀ ಆತು.

**ಮಾಧವ:** ಸರಿ. ಆ ಕಲ್ಲು ಕಟೆದು ಮೂರ್ತಿಯನ್ನು ಮಾಡೋ ಕೆಲಸ ನನ್ನ ಪಾಲಿಗೂ ಬಂದ್ಽದ. ಈಗ ನಾನು ನಿಮಗೆ ಕೆಲವು ಮಾತುಗಳನ್ನು ಕೇಳತೇನಿ; ಅವುಗಳಿಗೆ ಸಮಾಧಾನದಿಂದ ಉತ್ತರ ಹೇಳ್ರಿ. ಮತ್ತೆ ಏನನ್ನಾದರೂ ಕೇಳೋದಿದ್ದರೆ ಕೇಳ್ಳಿಕ್ಕೂ ಅಡ್ಡಿಯಿಲ್ಲ. ಮಾತ್ರ ಸುಮ್ಮ ಸುಮ್ಮನೆ ಗೊಂದಲ ಮಾಡಬಾರದು. ತಿಳೀತಿಲ್ಲೋ? ಈ ಹೊತ್ತು ಈ ದುರ್ಗಾದೇವೀ ಗುಡೀ ಬೈಲು ದಿನಕ್ಕಿಂತ ಚೆಂದಕಾಣತದಲ್ಲ? ಯಾಕೆ ?

ಹರಿ ಃನ: ದೊರೀ ಮಕ್ಕಳು ಬಂದ್ಹಾಂಗ ನೀವೆಲ್ಲಾ ಬಂದೀರಿss; ಅದಕ್ಕ.

**ಮಾಧವ :** ಭಾರತದೊಳಗ ಈಗೆಲ್ಲಿಂದ ತರತೀರಪಾ ದೊರೆಗಳನ್ನs? ಸರದಾರ ವಲ್ಲಭಭಾಯಿ ಹೊಡೆತಕ್ಕs ದೊರೆಗಳ ಬೆನ್ನಿಗೆ ಮಣ್ಣು ಹತ್ತಿ ಹೋಗೇದ! ಅದು ಇರಲಿ. ನೀವೇ ತುಸು ಸುತ್ತ ಮುತ್ತ ನೋಡಿ ಹೇಳ್ರಿ– ಯಾಕೆ ಈ ಬೈಲು ಚೆಂದ ಕಾಣತದೆ, ಅಂತ.

**ಹರಿಜನ:** ದಿವಸಾ ದಿವಸಾ ಇಲ್ಲಿ ಎಲುಬು ಕಸಕಡ್ಡಿ ಬಿದ್ದಿರತಿತ್ತು. ಈ ದಿನಾ ನೀವು ಕಸಾ ಹೊಡೆದು ಜಳಾಜಳಾ ಮಾಡೀರಿ; ಅದಕ್ಕs ಚೆಂದ ಕಾಣತೈತಿ.

**ಮಾಧವ :** ಹೌದಪ! ಹೀಂಗ ಜಳಜಳ ಅದ ಅಂತಾನs ನಮಗೂ ನಿಮಗೂ ಇಲ್ಲಿ ಕೂಡ್ರಲಿಕ್ಕೆ ಆನಂದ ಅನಸತದ. ಇದೇ ರೀತಿ ನೀವು ಪ್ರತಿ ಒಬ್ಬರೂ ನಿಮ್ಮ ನಿಮ್ಮ ಮನೆ—ಅಂಗಳ, ಮನೆಯೊಳಗಿನ ಪಾತ್ರೆ-ಪಡಗ, ಮೈ ಮತ್ತು ಮೈಮೇಲಿನ ಬಟ್ಟೆ— ಹೀಗೆ ಯಾವುದೊಂದೂ ಹಸನಾಗಿ ಇಟ್ಟಿರಬೇಕು.

**ಹರಿಜನ :** ಹೊಲಸಿನ್ಯಾಗ ಹುಟ್ಟಿ ಹೊಲಸಿನ್ಯಾಗೇ ಬೆಳೆಯೋ ಹೊಲ್ಯಾರಿಗೆ ಯಾತಕ್ಕ ಬೇಕ್ರೀ ದ್ಯಾವ್ರೂ ಜಳಾಜಳಾ ಇರೋದು ?

**ಮಾಧವ :** (ಕನಿಕರದಿಂದ) ಇದೇ ನಿಮ್ಮ ತಪ್ಪು ತಿಳಿವಳಿಕೆ. ಎಲ್ಲರೂ ಹೊಲೆಯೊಳಗೇ ಹುಟ್ಟಿ ಹೊಲೆಯೊಳಗೇ ಬೆಳೆಯೋರೇ? ಅದಕ್ಕs ಹೇಳ ತೇನಿ—ಹೊಲೆಯರು ಅನ್ನೋ ತಪ್ಪು ತಿಳಿವಳಿಕೆ ಬಿಟ್ಟುಬಿಡಿರಿ; ಮಹಾತ್ಮರು ಕೊಟ್ಟ ಹೆಸರು ಹರಿಜನ ಅಂತ ಹೇಳಿರಿ. ಅಲ್ಲಪಾ, ಹರಿಜನರು ಹಸನಾಗಿರ ಬಾರದು ಅಂತ ಹೇಳತೀಯೇನು? ಮನೆಯ ಸುತ್ತು ಮುತ್ತು ಒಳಗೆ ಹೊರಗೆ ಸ್ವಚ್ಛವಾಗಿದ್ದರೆ ನಿಮಗೆ ಬೇನೆ ಬೇಸರಿಕೆ ಬರೋದಿಲ್ಲ. ನೀವು ಆಗಿಂದಾಗ ಬೇನೆ ಬೀಳೋದಕ್ಕೆ ಈ ಹೊಲಸೇ ಕಾರಣ. ನಿಮಗೆ ಜಡ್ಡು ಬಂತು ಅಂದರೆ ನಿಮ್ಮನ್ನು ಉಪಚಾರಮಾಡಲಿಕ್ಕೆ ಈ ಹೊಲಸಿನೊಳಗಿಂದ ಹಾಯ್ದು ಯಾವ ವೈದ್ಯರೂ ಡಾಕ್ಟರರೂ ಬರೋದಿಲ್ಲ.

**ಒಬ್ಬಹರಿಜನ :** ಬರದಿದ್ದರ ನಮ್ಮವ್ವ ದುರಗವ್ವ ಅದಾಳಲ್ರೀ...

**ಮತ್ತೊಬ್ಬ ಹರಿಜನ :** ಮುರಕೊಂಡು ಹೋಗಾಕ...!

**ಮಾಧವ :** ಹೌದ ನೋಡು; ಇದ್ದ ಮಾತನೇ ಹೇಳಿದಿ! ಅಲ್ಲೋ, ದುರಗವ್ವ ಜಳಾಜಳಾ ಇರಬಾರದು ಅಂತ ಹೇಳತಾಳs ನಿಮಗ? ಆಕೀನೂ ದೇವರೇ ಅಲ್ಲೇನಪಾ? ಜಳಾಜಳಾ ಇರದಿದ್ದರ ಯಾವ ದೇವರೂ ನಿಮ್ಮನ್ನs ಹತ್ತರ ಹಾಯಗೊಡೋದಿಲ್ಲ; ಹತ್ತರ ಹೋದರೂ ನಿಮ್ಮನ್ನ ಕಣ್ಣೆತ್ತಿ ನೋಡೋದಿಲ್ಲ.

**ಹರಿಜನ :** ನಿಮ್ಮ ಮಾತೂ ಒಪ್ಗೋತೇನ್ರಿ. ಊರ್ನೇ ಹಸಾ ಮಾಡ್ತೇವಂತs; ಅಂದಮ್ಯಾಗ ನಮ್ಮ ಮನೀದೂ ಕಸಾ ಹೊಡ್ಕೊಳ್ಳಾಕ ನಮಗೇನೂ ಬಿರೀ ಅಗಾಕಿಲ್ಲ. ಆದರ ದಣೇರೇ, ಹಗಲೂ ಹನ್ಯಾಳ್ದ ತಾಸೂ ಕಸದಾಗs ಕಾಲಾ ಕಳೆಯೋ ಮಕ್ಕಳಿಗೆ ಜಳಾಜಳಾ ಅರಬೀ ಒಕ್ಕಾಳ್ಳಾಕ ಹೊತ್ತು ಯಾವಾಗ ಸಿಗಬೇಕ್ರೀ? ಹಾಕ್ಕೊಂಡ್ರ ಆ ಹೊಲಸಿನ್ಯಾಗ ಕೆಲಸಾ ಹ್ಯಾಂಗ ಮಾಡಬೇಕ್ರಿ?

**ಮಾಧವ :** ಅಲ್ಲವಾ, ಕಸಾ ಹೊಡೀಲಿಕ್ಕೆ ಹೆಂಡಿರು ಮಕ್ಕಳು ಸಹಿತ ಕೇರಿಯವರೆಲ್ಲs ಹೋಗೋದಿಲ್ಲಲ್ಲ; ಬಹಳ ಅಂದ್ರೆ ನಾಲ್ಕಾರು ಜನ ಹೋಗತಿದ್ದೀರಿ. ಅವರನ್ನು ಬಿಟ್ಟು, ಉಳಿದವರ ಮೈಮೇಲಾದರೂ ಜಳಜಳ ಬಟ್ಟೆ-ಬರೆ ಯಾಕೆ ಇರಬಾರದು? ನೋಡಿದ್ಯಾ, ಇವರೆಲ್ಲರ ಮೈಮೇಲಿ ಎಂಥ ಕೊಳಕು ಅರಿವೆ ಅವ? ಹೀಂಗ **ಹೊಲಸಾಗಿದ್ದರs ಯಾರು ಮುಟ್ಟಿಸಿಕೊಂಡಾರು ಹೇಳು ನಿಮ್ಮನ್ನ? ಇದಕ್ಕಾಗೆ ನಿಮಗೆ 'ಮುಟ್ಟೇರಿ, ದೂರಸರೀರಿ-' ಅಂತಾರ.**

**ಹರಿಜನ :** ಯಪ್ಪಾs ನಾವೇನೋ ಚಲೋ ಅರಿಬೀ ಹಾಕ್ಕೊಂಡು ಕಾಮಣ್ಣನ್ಹಾಂಗ ಕಾಣಬೇಕಂದೇವ್ರಿsss; ಆದರ ಅಂತಾ ಚಮಕಿನ ಬಟ್ಟೀ ಕೊಳ್ಳಾಕ ದುಡ್ಡೊಂದು ಬೇಕಲ್ರೀsss!

**ಮಾಧವ :** ಚಮಕಿನ ಬಟ್ಟೆ ಕೊಳ್ಳಿರಿ, ಅಂತ ನಾ ಹೇಳಲಿಲ್ಲ; ಇದ್ದ ಅರಿವೆಗಳನ್ನೇ ತೊಳೆದು ಚಮಕ ಮಾಡಿಕೊಳ್ಳಿರಿ, ಅಂತ ಹೇಳತೇನಿ. ಹೊಸಬಟ್ಟೆs ಕೊಳ್ಳಿಕ್ಕೆ ನಿಮಗೆ ಬಡತನ ಇರಬಹುದು; ಆದರೆ ಇದ್ದ ಬಟ್ಟೆಗಳನ್ನೇ ಒಗೆದು ಬೆಳ್ಳಗೆ ಮಾಡಿಕೊಳ್ಳಿಕ್ಕೂ ಬಡತನ ಬಂದದೇನು? ಈ

ಕುಂಟುನೆವ ಹೇಳಲಿಕ್ಕೆ ನಿಮ್ಮ ಮೈಗಳ್ಳತನ ಕಾರಣ ಇದ್ದಿರಬೇಕು; ಇಲ್ಲವೆ, ಹರಿಜನರು ಹಸನಾಗಿರಬಾರದು ಅಂತ ನಿಮಗೆ ತಪ್ಪು ತಿಳಿವಳಿಕೆ ಆಗಿರಬೇಕು.

**ಹರಿಜನ:** ನಾವು ಹಸನಾಗಿದ್ದರಿ ವ್ಯಾಗಿನ ಜಾತೇರು ನಮ್ಮನ್ನ ಮುಟ್ಟತಾರೇನ್ರಿ?

**ಮಾಧವ:** ಮತ್ತೆಲ್ಲಿಂದ ತಂದೆಪಾ, ಮೇಲೆ ಕೆಳಗೆ ಅನ್ನೋ ಜಾತೀನ್ನಽಽ! ಮೇಲಿನ ಜಾತಿಯುವರು ಅಂತ ಮುಗಿಲೊಳಗಿಂದ ಇಳಿದು ಬಂದಿರೋದಿಲ್ಲ; ಕೆಳಗಿನ ಜಾತಿಯುವರು ಅಂತ ಪಾತಾಳದೊಳಗಿಂದ ಎದ್ದು ಬಂದಿರೋದಿಲ್ಲ. ಎಲ್ಲರೂ ಈ ಭೂಮಿಯಮೇಲೆ ತಾಯಿ ಹೊಟ್ಟೆಯೊಳಗಿಂದಲೇ ಹುಟ್ಟಿದವರೇ. ಮಾಡೋ ಕೆಲಸದ ಮೇಲೆ ಜಾತಿ ಹೆಸರು ಹುಟ್ಟಿರೋದು. ಸಂಸಾರ ಸರಿಯಾಗಿ ಸಾಗಬೇಕಾದರೆ ಎಲ್ಲಾ ತರದ ಕೆಲಸಗಾರರೂ ಬೇಕೇಬೇಕು. ಎಂದಮೇಲೆ, ಕೆಳಗೆ ಮೇಲೆ ಅನ್ನೋ ಜಾತಿ ಎಲ್ಲಿಂದ ಬರತವೆ? ಹರಿಜನರು ಹಸನಾಗಿದ್ದರೆ, ನೀವು ತಿಳಕೊಂಡಂತೆ, ಅವರೂ ಮೇಲಿನ ಜಾತಿಯುವರೇ. ಹಾಗಿದ್ದಾಗ ಈ ಮನುಷ್ಯರ ಮಾತು ಹಾಗಿರಲಿ, ದೇವರು ಸುದ್ಧಾ ನಿಮನ್ನು ಮುಟ್ಟತಾನೆ.

**ಹರಿಜನ:** ಆಕಾಽಽಽ, ದ್ಯಾವ್ರು ಅಂದ ಕೂಡ್ಲೆ ನೆಪ್ಪಾತ್ರಿಽಽ; ದೇವರ ಗುಡೀ ಹೋಗಾಕ ನಮ್ಮನ್ನ ಬಿಡೋದಿಲ್ಲಲ್ರೀ?

**ಮಾಧವ:** ಹೀಂಗ ಅಸ್ವಚ್ಛ ಇದ್ದಿರಿ ಅಂದರಽಽ ದೇವರ ಗುಡಿಯೊಳಗೇ ಯಾಕೆ—ಯಾರ ಮನೆಯೊಳಗೂ ನಿಮನ್ನ ಬಿಡೋದಿಲ್ಲ.

**ಹರಿಜನ:** ಅಲ್ರೀ ದಣೇರೇ, ಶಾರದಾಗ (ಶಹರದೊಳಗೆ) ನಮ್ಮ ಜನಾ ಬೇಕಾಧ್ಹಾಂಗ ಜಳಾಜಳಾ ಇರತಾರ; ಇಸ್ತ್ರೀ ಅಂಗಿ, ರೇಶಿಮೆ ಅಂಗಿ, ಸಾಹೇಬರಂಗ ಚಣ್ಣಽ ಕೋಟು ಹಾಕ್ಕೊಂಡಿರತಾರ, ಅಂತಾವರ್ನೂ ಗುಡ್ಯಾಗ ಬಿಡಾಕಿಲ್ಲಂತ್ರೀಽಽ!

**ಮಾಧವ:** ಅದು ಬಹುದಿವಸಗಳ ರೂಢಿಯ ಪ್ರಭಾವ. ಆದರೂ ಅದೆಲ್ಲ ಈಗ ಶಹರದೊಳಗ ಕಡಿಮೆ ಆಗೇದ. ಅನೇಕ ದೇವಮಂದಿರದೊಳಗ ಹರಿಜನರ ಪ್ರವೇಶ ಆಗೇದ. ಊರಜನರ ಕೂಡ ಅವರೂ ಬೆರೆತು ತಿರುಗಾಡತಾರೆ, ಊರೊಳಗೆ ಮನೆ ಕಟ್ಟಿಕೊಂಡಿದಾರೆ. ಅಲ್ಲದೆ, ಈ ವಿಷ

ಯಕ್ಕ ಭಾರತ ಸರಕಾರ ತುಂಬಾ ಲಕ್ಷ್ಯ ಕೊಟ್ಟsದ. ಚಹಾದಂಗಡಿ, ಖಾನಾವಳಿ, ದೇವಾಲಯ, ಸಾರ್ವಜನಿಕ ಕೆರೆ-ಬಾವಿ ಹೀಗೆಎಲ್ಲಾ ಕಡೆಗಳಲ್ಲಿಯೂ ಹರಿಜನರಿಗೆ ಪ್ರವೇಶ ಕೊಡಬೇಕು, ಅಂತ ಕಾಯ್ದೆ ಮಾಡೇದ. ಅದನ್ನ ಯಾರಾದರೂ ಮೀರಿದರೆ, ಅಂಥವರಿಗೆ ಶಿಕ್ಷಾ-ದಂಡ ಮಾಡತದೆ ಸರಕಾರ.

**ಹರಿಜನ**: ಸರಕಾರದ ಕಾದೇವು ಇದ್ದರೂ ಹರಿಜನರನ್ನ ಹತ್ತರಕ್ಕ ಬರಗೊಡೋದಿಲ್ಲಲ್ರೀ ಜನಾ?

**ಮಾಧವ**: (ತತ್ತ್ವಜ್ಞಾನಿಯ ರೀತಿಯಲ್ಲಿ) ಹುಟ್ಟಿದ ಕೂಸು ಒಮ್ಮೆಲೆ ಎದ್ದು ಅಡ್ಡಾಡೋದಿಲ್ಲ; ಅದಕ್ಕೂ ಕೆಲವು ಕಾಲ ಬೇಕು. ಇಷ್ಟು ದಿವಸ ನಿಮ್ಮನ್ನ ದೂರ ದೂರ ಇಟ್ಟು—ಮುಟ್ಟಬೇಡಿರಿ ಅಂತ ಹೆದರಿಸಿ ಆ ಜನರಿಗೆ ಹೆಮ್ಮೆಯ ಚಟ ಬಿದ್ದsದ! ಅದನ್ನು ಅವರು ಒಮ್ಮೆಲೆ ಬಿಡೋ ಹಾಗಿಲ್ಲ. ಮತ್ತೆ, ಆ ಜನರಿಂದ ದೂರ ಇದ್ದು ನಿಮಗೂ ಒಗ್ಗಿ ಹೋಗೇದ. ಅವರು ತಾವಾಗಿಯೇ ಕರೆದರೂ ಅವರ ಹತ್ತರ ಹೋಗಬೇಕೆಂದರೆ ನಿಮಗೂ ಹೆದರಿಕೆ ಬಿಡೋ ಹಾಗಿಲ್ಲ. ಇಲ್ಲೇ ನೋಡಿದಿರಲ್ಲ; ಈ ಮರಿಯಪ್ಪನ್ನ! ಮುಂದೆ ಬಾ ಅಂತ ಕರೆದರೆ ಏನು ಹೇಳಿದ? ಈ ಹರಿಜನೋದ್ಧಾರದ ಕಾರ್ಯ ಕೈಗೂಡಬೇಕಾದರೆ, ಕೇವಲ ಸರಕಾರದ ಕಾಯ್ದೆಗಳು ಉಪಯೋಗಕ್ಕ ಬರೋದಿಲ್ಲ; ಉದ್ದೇಶಕ್ಕೆ ತಕ್ಕಂತೆ ಸಾರ್ವಜನಿಕರ ಮನಸ್ಸನ್ನು ಬದಲಿಸಬೇಕಾಗತದ.

**ಹರಿಜನ**: ನಾವ್ಹೆಂಗ ಬದಲು ಮಾಡಬೇಕ್ರೀ ಅವರ್ನss?

**ಮಾಧವ**: ನೀವು ಅವರನ್ನು ತಿದ್ದಬೇಕಾಗಿಲ್ಲ; ನಿಮ್ಮಿಂದ ಅದು ಸಾಧ್ಯವೂ ಇಲ್ಲ. ನಿಮ್ಮನ್ನೇ ನೀವು ತಿದ್ದಿಕೊಂಡರೆ ತೀರಿತು. ತನ್ನನ್ನು ತಾನೇ ಉದ್ಧಾರ ಮಾಡಿಕೊಳ್ಳಬೇಕು, ಅಂತ ಶ್ರೀಕೃಷ್ಣಪರಮಾತ್ಮ ಹೇಳುತಾನೆ. ನಿಮ್ಮ ಉದ್ಧಾರಕ್ಕೆ **ಮೊದಲನೆಯ ಮೆಟ್ಟಿಲು** ಎಂದರೆ, ನಿಮ್ಮ **ಮನೆ, ಕೇರಿ, ಬಟ್ಟೆ-ಬರೆ ಎಲ್ಲವನ್ನು ಸ್ವಚ್ಛವಾಗಿಡೋದು.** ಆ ಮೇಲೆ ನಿಮಗೆ ಎಲ್ಲ ಕಡೆಗೂ ಪ್ರವೇಶ ಸಿಕ್ಕತದೆ.

**ಹರಿಜನ**: ಆ ಮ್ಯಾಗ ಗುಡಿಯಾಗೂ ಬಿಡತಾರ್ರೆ...?

**ಮಾಧವ :** ಮತ್ತೆ ಅದೇ ಹುಚ್ಚು ಹಂಬಲ. ಆ ಜನರು ನಿಮ್ಮನ್ನು ದೇವರ ಹತ್ತರ ಬಿಡೋದಿಲ್ಲ ಅಂದರೆ, ಅವರ ದೇವರೇ ಪ್ರತಿದಿವಸವೂ ನೀವಿದ್ದಲ್ಲೇ ಬರತಾನಲ್ಲ ?

**ಹರಿಜನ :** (ಬೆರಗಾಗಿ) ಅವರ ದೇವರ್‍ರೀ‌ऽऽ ?

**ಮಾಧವ :** ಹೌದು; ದೇವರು ಎಲ್ಲರಿಗೂ ಒಬ್ಬನೇ. ಈಗ ನೋಡಿರಿ—ಬ್ರಾಹ್ಮಣರು ಸಂಧ್ಯಾವಂದನೆ ಅಂತ ದಿವಸಕ್ಕೆ ಮೂರು ಸಲ ಸೂರ್ಯದೇವನಿಗೆ ಅರ್ಘ್ಯ ಕೊಡುತಾರಲ್ಲ ? ಅದೇ ಸೂರ್ಯದೇವ ನಿತ್ಯವೂ ನಿಮ್ಮ ಮನೆಗೆ—ನೀವು ಇದ್ದಲ್ಲಿಗೆ—ಬರುತಾನೋ ಇಲ್ಲೋ ? ಅವನನ್ನು ತೋರಿ ಸೋದಿಲ್ಲ ಅಂತ ಅವರೂ ಹಟ ಹಿಡಿಯೋ ಹಾಗಿಲ್ಲ; ಅವನನ್ನು ತೋರಿ ಸೋದಿಲ್ಲ ಯಾಕೆ, ಅಂತ ನೀವೂ ಕೆಣಕಿ ಕೇಳೋ ಕಾರಣ ಇಲ್ಲ. ದೇವರು ಗುಡಿ-ಗುಂಡಾರಗಳಲ್ಲಿ ಮಾತ್ರವೇ ಇರುತಾನೆ ಅಂತ ತಿಳಿದೀರೇನು ? ಈ ಭೂಮಿತಾಯಿ ನಮ್ಮ ದೇವರು ಅಲ್ಲವೇ ? ಅದೂ ಹೋಗಲಿ; ಈ ನಿಶಾನೆ-ಈ ಮೂರು ಬಣ್ಣದ ಬಾವುಟ—ನಮ್ಮೆಲ್ಲರ ರಾಷ್ಟ್ರದೇವತೆ; ಭಾರತದಲ್ಲಿ ಇರುವ ಎಲ್ಲರಿಗೂ ಪೂಜ್ಯ ದೇವತೆ ! ಇದನ್ನು ಕೈಮುಟ್ಟಿ ಪೂಜೆ ಮಾಡಲಿಕ್ಕೆ ಪ್ರತಿಯೊಬ್ಬನಿಗೂ ಹಕ್ಕು ಇದೆ. ಸಾಕಲ್ಲವೇ ? ಈ ಪ್ರಸಂಗದೊಳಗೇ ಈ ಸ್ವಯಂಸೇವಕರು ಈ ನಮ್ಮ ರಾಷ್ಟ್ರದೇವತೆಯ ಹಾಡನ್ನು ಹೇಳುತಾರೆ. ಎಲ್ಲರೂ ಎದ್ದು ನಿಂತು ಕೇಳಿರಿ.

(ಝಂಡಾ ಊಂಚಾ ರಹೇ ಹಮಾರಾ ಅಥವಾ ಏರಿತದೋ ನಮ್ಮ ಬಾವುಟ, ಇಲ್ಲವೆ, ಇದೇ ಅರ್ಥದ ಬೇರಾವುದಾದರೂ ಒಂದು ಪದವನ್ನು ಹಾಡತಕ್ಕುದು. ಮತ್ತೆ ಜಯ ಜಯಕಾರ......)

ಈಗ ಈ ದೇವರ ದರ್ಶನ ಆಯ್ತಲ್ಲ ! ಗಾಂಧಿಜಿ ಹೇಳಿದ ಹಾಗೆ ನಡೆಕೊಂಡರೆ ನಿಮಗೆ ಎಲ್ಲವೂ ಅನುಕೂಲ ಆಗುತವೆ. ಸರಿ. ಇವರು (ಹನುಮಂತಪ್ಪನನ್ನು ಮುಟ್ಟಿ) ಯಾರು ಅಂತ ಗೊತ್ತದೆ ಏನು ನಿಮಗೆ !

**ಹರಿಜನ :—** ಈಟು ತಿಳಿಯಾಕಿಲ್ಲೇನ್ರೀ ? ಕೈಗೆ ಕೈಹಿಡಕೊಂಡು ಅಡ್ಡಾಡತೀರಿ; ಅಂದಮ್ಯಾಗ ನಿಮ್ಮ ಬಳಗದವರ ಪೈಕೀನೇ ಇರಬೇಕಲ್ರೀ ?

**ಮಾಧವ :** ಅಷ್ಟ್ಯಾಕ ಬೇರೆಗಾಗಿ ಕೇಳತೀ? ಇವರು ನಮ್ಮ ಬಳಗದವರಲ್ಲ; ನಿಮ್ಮ ಬಂಧುಗಳು.

**ಹರಿಜನ :** ಏನಂದ್ರಿ? ಇವರೂ ಹರಿಜನರ್ರಿಽಽ?

**ಮಾಧವ :** ಇವರು ಇಷ್ಟು ಜಳ ಜಳ ಇರೋದನ್ನ ನೋಡಿ ನಿನಗೆ ಬಹಳ ಆಶ್ಚರ್ಯ ಆಯ್ತಲ್ಲ? ಹೀಂಗಿದ್ದರೆ ನಿಮ್ಮನ್ನು ಯಾರು ಯಾಕೆ ಮುಟ್ಟೋದಿಲ್ಲ ಹೇಳು. ಇನ್ನು ಒಂದು ಮಾತು ಕೇಳತೇನಿ! ನಮಗೂ ಈ ಹನುಮಂತಪ್ಪನಿಗೂ ಇಷ್ಟು ಯಾಕೆ ಸಲಿಗೆ ಅದ ಹೇಳತೀರಾ?

**ಹರಿಜನ :** ಹೇಳಲ್ರ್ಯಾ? ನೀವೂ ಅವರೂ ಕೂಡೇ ಕಲಿತೀರಿ! ಹೌದಲ್ರಿ?

**ಮಾಧವ :** ಹೌದು ನೋಡು; ಬೀಜ ಮಾತನ್ನೇ ಹೇಳಿದಿ. ನಿಮ್ಮ ಮಕ್ಕಳೂ ಇವರಂತಯೇ ನಾಲೆ ಕಲಿತರೆ, ಎಲ್ಲರಿಗೂ ಬೇಕಾಗುತಾರೆ; ಸಮಾಜದಲ್ಲಿ ಮಾನ-ಮರ್ಯಾದೆ ಪಡೀತಾರೆ.

**ಹರಿಜನ :** ದುಡ್ಯೋ ಮಕ್ಕಳ್ನ ನಾಲಿಗೆ ಕಳಿಸಿದರೆ ಹೊಟ್ಟೀಮ್ಯಾಗ ಕೇರಿನ ಬರೀ ಹಾಕ್ಕೋ ಬೇಕಾದೀತಲ್ರೀಽ! ಬ್ಯಾಡಾ, ಅವರಿಗೆ ಕಲಿಸೇವು ಅಂದ್ರ, ಕೈಯಾಗ ರೊಕ್ಕ ಒಂದು ಇರಬೇಕಲ್ರೀ ಯಪಾ?

**ಮಾಧವ :** ಅಲ್ಲಪಾ, ಎಷ್ಟು ದುಡೀತಿದ್ದಾವು, ನಿಮ್ಮ ಹುಡುಗರು? ಮುಂಜಾವದಿಂದ ಸಂಜೀತನಕ ತಿರುಗಿ ಒಂದು ಕಟ್ಟಿಗೆ ಹೊರಿ ತಂದರೆ, ಅದರ ಬೆಲೆ ಸುಮಾರು ನಾಲ್ಕಾಣೆ ಆದೀತು. ಆದರೆ ಅವರ ಊಟಕ್ಕೆ ದಿನಾ ಆರೆಂಟು ಆಣೆ ಬೇಕು. ಅದನ್ನು ಬಿಟ್ಟು, ಅವರು ನಾಲಿಗೆ ಹೋದರೆ, ಸರಕಾರ ಅವರ ಊಟ ಉಡಿಗೆ ಪುಸ್ತಕ -ಬಟ್ಟೆ ಮೊದಲಾಗಿ ಎಲ್ಲಾ ವೆಚ್ಚವನ್ನು ನೋಡಿಕೊಳ್ಳತದೆ.

**ಹರಿಜನ :** ಕಲ್ತಮ್ಯಾಲರೆ ನಮ್ಮ ಮಕ್ಕಳ್ನ ಮುಟ್ಟತಾರೇನ್ರೀ, ಮ್ಯಾಲಿನ ಜಾತ್.........?

**ಮಾಧವ :** ಮುಟ್ಟತಾರೆ; ಇಷ್ಟೇ ಅಲ್ಲ, ನಿಮ್ಮ ಮಕ್ಕಳು ಹೆಚ್ಚಾಗಿ ಕಲಿತು ಅಧಿಕಾರಕ್ಕೆ ಬಂದರೆಂದರೆ, ಸಲಾಮು ಹೊಡಕೋತಾ ಬರತಾರೆ,

ಎಲ್ಲಾ ಜಾತಿಯವರೂ ಅವರ ಹತ್ತರ. ಡಾ. ಅಂಬೇಡಕರ ಅಂತ ಹೆಸರು ಕೇಳೀರಲ್ಲ? ಅವರೂ ಹರಿಜನ ಸಮಾಜದವರೇ. ಬಹಳ ಬುದ್ಧಿವಂತರು. ಅವರಿಗೆ ಎಲ್ಲಾ ಜನರೂ-ಸರಕಾರದವರು ಕೂಡ-ಬಹಳ ಮರ್ಯಾದೆ ಕೊಡುತಿದ್ದರು. ನಮ್ಮ ಭಾರತ ಸರಕಾರದಲ್ಲಿ ಅವರು ಕೆಲವು ಕಾಲ ಮಂತ್ರಿಗಳಾಗಿದ್ದರು. ಈ ದೇಶದ ಕಾಯದೆಗಳನ್ನು ಮಾಡಿದವರೂ ಅವರೇ. ಎಷ್ಟೋ ಹರಿಜನ ಬಂಧುಗಳೂ ಈಗಲೂ ಸರಕಾರದ ದೊಡ್ಡ ದೊಡ್ಡ ಅಧಿಕಾರಗಳಲ್ಲಿದ್ದಾರೆ; ಮಂತ್ರಿಗಳಾಗಿದ್ದಾರೆ. ಅವರನ್ನು ಆಗಾಗ ಸಭಾ-ಸಮಾರಂಭಗಳಿಗೆ ಕರೆದು ಎಲ್ಲರೂ ಸತ್ಕಾರ ಮಾಡುತಾರೆ; ಅವರೊಡನೆ ಊಟ-ಉಪಚಾರ ಮಾಡುತಾರೆ. ಇದನ್ನು ತಿಳಿದೂ ತಿಳಿದೂ ನೀವು ನಿಮ್ಮ ಮಕ್ಕಳನ್ನು ಯಾಕೆ ಶಾಲೆಗೆ ಕಳಿಸಬಾರದು ?

ಹರಿಜನ : ನಮಗೇನು ಗೊತ್ರಿ ಕಳಿಸತೇವ್ರಿ ಇನ್ನು ಮಕ್ಕಳನ್ನು ಶಾಲೆಗೆ.

ಮಾಧವ : ಅವರನ್ನಷ್ಟೇ ಕಲೀಲಿಕ್ಕೆ ಹಚ್ಚಿದರೆ ತೀರಲಿಲ್ಲ; ನೀವೆಲ್ಲ ದೊಡ್ಡವರು—ಹೆಣ್ಣುಮಕ್ಕಳೂ ಗಂಡುಮಕ್ಕಳೂ— ಓದು-ಬರಹ ಕಲೀಬೇಕು. ನಿಮ್ಮ ಕೇರೀ ಒಳಗೇ ಹನುಮಂತಪ್ಪ ಒಂದು ಸಾಲೆ ಸುರು ಮಾಡತಾರೆ. ನಾನೂ ಆಗಾಗ ಇಲ್ಲಿಗೆ ಬರತಿರತೇನಿ.

ಹರಿಜನ : (ನಿರಾಶೆಯಿಂದ) ನಾವೇನು ಕಲೀತೇವ್ರಿಽಽ ? ಮುಂಜಾಲಿಂದ ಜೆಂಜೀತನ ದುಡದರೂ ಹೊಟ್ಟೆಗೆ ಗಂಜೀ ಕಾಣೂ ಹಾಂಗಿಲ್ಲಽಽ !

ಮಾಧವ : ನಿಮ್ಮ ಬಗ್ಗೆ ಸರಕಾರ ಈ ವಿಚಾರವನ್ನೂ ಮಾಡೇದ. ಸಾಧ್ಯವಿದ್ದ ಮಟ್ಟಿಗೂ ನಿಮಗೆ ಹೊಲಾ ಕೊಡತಾರೆ. ನೀವು ಮೈಮುರಿದು ದುಡೀಲಿಕ್ಕೆ ತಯಾರಾಗಬೇಕು. ಅಷ್ಟೇ. ಮತ್ತೆ ನಿಮಗೆ ಮನೆ ಕಟ್ಟಿಸೋ ವ್ಯವಸ್ಥಾನೂ ನಡದದ.

ಹರಿಜನ : (ಆನಂದದಿಂದ) ಆ ಮ್ಯಾಗ ಈ ಕೆರಾ ಹೊಲಿಯೋ ಕೆಟ್ಟ ಉದ್ದೇಗಾ ಬಿಟ್ಟಬಿಡತೇವಿ ನೋಡ್ರಿ !

ಮಾಧವ : ಹುಚ್ಚಪ್ಪ ಇದ್ದೀ ಆತು. ಉದ್ಯೋಗದೊಳಗೆ ಒಳ್ಳೇದು, ಕೆಟ್ಟದು ಅಂತ ಇರೋದೇ ಇಲ್ಲ. ಬಾಳ್ವೆಗೆ ಬೇಕಾದ್ದೆಲ್ಲ ಒಳ್ಳೇದೇ ಅಂತ

ತಿಳೀಬೇಕು. ಹೊಲದ ಕೆಲಸ ಆರು ತಿಂಗಳು ಮಾತ್ರ ನಿಮ್ಮ ಹೊಟ್ಟೆಕ ತುಂಬಿಸೀತು. ಉಳಿದ ವ್ಯಾಳ್ಯಾಕ್ಕ ನಿಮ್ಮ ಚರ್ಮದ ಉದ್ಯೋಗ ಮಾಡಿದರೇ ನಿಮ್ಮ ಹೊಟ್ಟೆ ತುಂಬೋದು. ಮಾತ್ರ, ಅದನ್ನು ಒಂದಿಷ್ಟು ಜಾಣತನದಿಂದ ಮಾಡಲಿಕ್ಕೆ ಕಲೀಬೇಕು; ಎಂದರೆ, ಅದೇ ಕೆಲಸದೊಳಗೇ ಹೊಸ ಹೊಸ ರೀತಿ ಮಾದರಿಗಳನ್ನು ಮಾಡಬೇಕು. ಅದರ ಅನುಕೂಲತೆಗಾಗಿ ಸಂಘ ಸೊಸಾಯಿಟಿ ಅಂತ ಮಾಡಿಕೊಳ್ಳಬೇಕು. ಅದನ್ನೆಲ್ಲ ನಿಮಗೆ ನಾನು ಸರಕಾರದಿಂದ ಮಾಡಿಸಿಕೊಡತೇನಿ.

**ಹರಿಜನ:** ಸರಕಾರ ನಮಗ ದುಡ್ಡನೂ ಕೊಡತೇತ್ರೀ ?

**ಮತ್ತೊಬ್ಬ ಹರಿಜನ:** ಹೂನಪಾ ಮಗನ್ಸ! ಬರೇ ದುಡ್ಡs ಯಾಕ್ಸ—ಮದಿವೀ ಮಾಡಿ ಮಕ್ಕಳ್ನೂ ಹಡದು ಕೊಡತೇತಿ! ಸರಕಾರ ಸಾಯಾ ಮಾಡಬೇಕಾದ್ರ ನಾವೂ ದುಡ್ಡು ಕೊಡಬೇಕಲ್ರೀ ?

**ಮಾಧವ:** ಸರಿಯಾಗಿ ಹೇಳಿದಿ. ಸೊಸಾಯಿಟಿ ಬೇಕಾದರೆ, ನಿಮ್ಮಿಂದನೂ ಸ್ವಲ್ಪ ದುಡ್ಡು ಕೊಡಬೇಕಾಗತದೆ.

**ಹರಿಜನ:** ಹೊಟ್ಟೆಗೇ ಹಿಟ್ಟು ಇಲ್ಲದಾಗ ನಾವೇನು ಕೊಟ್ಟೇವ್ರೀ ದುಡ್ಡು ?

**ಮಾಧವ:** ನಿಮ್ಮ ಹೊಟ್ಟೆಗೆ ಹಿಟ್ಟು ಇಲ್ಲದಂತೆ ಆದದ್ದು—ನೀವು ದುಡೀಲಾರದವರು ಅಂತ ಅಲ್ಲ; ದುಡಿದದ್ದನ್ನೆಲ್ಲ ಕುಡಿದೂ ತಿಂದೂ ಹಾಳು ಮಾಡಿ ಬಿಟ್ಟೇರಿ ಅಂತ. ಕುಡುಕರಿಗೆ ಎಷ್ಟು ದುಡ್ಡಿದ್ದರೆ ನಾಕಾದೀತು, ಹೇಳ್ರಿ! ಈ ಕುಡಿತದ ಸಲುವಾಗಿಯೇ ಸಾಲಗಾರರಾಗಿದ್ದೀರಿ; ಹೆಂಡರು ಮಕ್ಕಳ ಮೈಮೇಲೆ ಗಟ್ಟುಳ್ಳ ಬಟ್ಟೆ ಕೂಡ ಇಲ್ಲದಂತೆ ಮಾಡಿದ್ದೀರಿ.

**ಹರಿಜನ:** ಸರಕಾರ ಈಗ ಸೇಂದಿ ಸೆರೆ ಸಿಗಧಾಂಗ ಮಾಡೇತಲ್ರಿs?

**ಮ. ಹರಿಜನ:** ಅದು ಸಿಗಲಿಲ್ಲಾ ಅಂದ್ರ ಬಟ್ಟೀ ಸೆರೇ ಕುಡ್ಯೋದು ಬಿಟ್ಟೇ ಏನಲೆ ಮಗನ್ಸ? ಯಪಾ, ನೀವು ಹೇಳೋದು ಕರೇವೈತ್ರಿ. ಈಗನಕಾ ಈ ಬಟ್ಟೀ ಸೆರೇದ ಕಾಲಾಗ ನಮ್ಮದು ಏನೇನೂ ಉಳೀಲಿಲ್ರೀ. ಮಕ್ಕಳಿಗೆ ತಿನ್ನಾಕ ರೊಟ್ಟಿ ಇಲ್ಲದಿದ್ದರೂ ಕುಡ್ಯೋದು ಬಿಡಾಕವಲ್ರು ಈ ಜನ.

**ಮಾಧವ :** ಇಷ್ಟು ದಿವಸ ಆದದ್ದು ಆಗಿ ಹೋಯ್ತು. ಇನ್ನು ಮೇಲಾದರೂ ಕುಡಿಯೋದು, ಸತ್ತ ದನಾ ತಿನ್ನೋದು, ನಿಮ್ಮ ಹೆಣ್ಣು ಮಕ್ಕಳನ್ನು ಸೂಳೆ ಅಂತ ಬಿಡೋದು— ಈ ಎಲ್ಲಾ ಕೆಟ್ಟ ಚಾಳಿಗಳನ್ನು ನೀವು ಬಿಟ್ಟು ಬಿಡಬೇಕು; ಮತ್ತೆ ಈ ವರಿಗೆ ನಾ ಹೇಳಿದ್ದನ್ನೆಲ್ಲ ನಡೆಸ ಬೇಕು. ಇದಕ್ಕೆಲ್ಲ ನೀವು ಒಪ್ಪಿದರೆ, ನಾನೂ ನನ್ನ ಗೆಳೆಯರೂ ನಿಮ್ಮ ಆಳಾಗಿ ದುಡೀತೇವಿ.

**ಹರಿಜನ :** ಎಂತಾ ಮಾತ್ರೀ ಯಪ್ಪಾs, ನಮ್ಮ ಹಿತಕ್ಕೇ ಹೇಳ್ತೀರಿ! ಇನ್ನು ಮುಂದೆ ಎಲ್ಲಾ ಎಲ್ಲಾ ಕೆಟ್ಟ ಗುಣಾನೂ ಬಿಟ್ಟ ಬಿಡತೇವಿ.

**ಮಾಧವ :** ಬರೀ ತುದಿ ನಾಲಿಗೇ ಮೇಲಿನ ಮಾತು ಆಗಬಾರದು ಇದು. ನಿಮ್ಮ ದುರ್ಗಾದೇವತೆಯ ಸಾಕ್ಷ್ಯವಾಗಿ, ಮಹಾತ್ಮಾ ಗಾಂಧಿಯವರ ಸಾಕ್ಷ್ಯವಾಗಿ ನೀವೆಲ್ಲ ಪ್ರತಿಜ್ಞಾ ಮಾಡಬೇಕು.

**ಹರಿಜನ :** ಮಾಡತೇವ್ರಿ! ಇನ್ನು ಮುಂದೆ ಸೂಳೇರ್ನ ಬಿಡೋದಿಲ್ಲ; ಆದರೆ ಈಗ ಬಿಟ್ಟೀವಲ್ರೀ......ಅವರ ಗತಿ ಏನು? ಊರಾನ್ನ ಮಂದಿ ಕಕ್ಕರಮಬ್ಬು ಆತು ಅಂದರs—ಹಾಂಗ ಹಾಂಗs ಕುರೀದಡ್ಡೀ ಹತ್ರ ತೋಳನ ದಂಡು ತಿರಗಿದ್ಹಾಂಗ ತಿರಗತಾವ್ರೀ—ಅವರ್ನ ದುರಗವ್ವ ನುಂಗಾs! ಆವರಿಗೆಲ್ಲ ಬಟ್ಟೀ ಸೆರಿ, ಕುರಿ-ಕೋಳೀತತ್ತಿ ತರಾಕ ನಾವs ಆಡ್ಡಾಡ ಬೇಕಲ್ರೀ ಮತ್ತ!

**ಮಾಧವ :** ಅವರನ್ನೆಲ್ಲ ನಾನು ನೋಡಿಕೊಳ್ಳತೇನಿ. ಈಗ ಬಿಟ್ಟಿ ರುವ ಸೂಳೆಯರಲ್ಲಿ ಎಳೆವಯಸ್ಸಿನವರಿದ್ದರೆ ಅವರ ಮನವೊಲಿಸಿ ಎಲ್ಲಾ ದರೂ ಮದಿವೇ ಮಾಡಿಕೊಡಿರಿ; ವಯಸ್ಸಾದವರಿದ್ದರೆ ಅವರಿಗೆ ಉಪಜೀವ ನಕ್ಕೆ ಏನಾದರೂ ಒಂದು ಉದ್ಯೋಗs ಹಚ್ಚಿಕೊಡೋಣ. ನೋಡೋಣಂತೆ, ಪ್ರಸಂಗ ಬರಲಿ. ಸದ್ಯಃ ನೀವು ಒಳ್ಳೇ ರೀತಿಯಿಂದ ಇರೋಬಗ್ಗೆ ಪ್ರತಿಜ್ಞಾ ಮಾಡಿರಿ. ಆಮೇಲೆ ತಪ್ಪಿದರೆ ಮಾತ್ರ ನಿಮ್ಮ ಕಾಲಮೇಲೆ ನೀವೇ ಕಲ್ಲು ಹಾಕಿಕೊಳ್ಳತೀರಿ; ಹರಿಜನರು ಹೋಗಿ ಮತ್ತೆ ಹೊಲೆಯರಾಗತೀರಿ. ಎಚ್ಚರಿಕೆ ಇರಲಿ.

**ಹರಿಜನ :** ಎಂತಾ ಮಾತ್ರಿ ದಣೇರs! ಏನೋ ನಮ್ಮ ದುರಗವ್ವನs ನಿಮ್ಮ ಹೊಟ್ಟ್ಯಾಗ ಹೊಕ್ಕು ಇಲ್ಲಿಗೆ...

**ಮತ್ತೊಬ್ಬ ಹರಿಜನ :** ದುರಗವ್ವನ್ನ ಅವರ ಹೊಟ್ಟ್ಯಾಗ ಯಾಕ್ ಹೊಗಸತೀಯಲೇ ? ಒಳ್ಳೇಕೆಲ್ಲ ಆಕಿ. ಹೊಟ್ಟ್ಯಾಗ ಹೊಕ್ಕಳು ಅಂದ್ರ... ದುರಗವ್ವ ಗೋಣು ಮುರಗವ್ವ ಆಗತಾಳ.

**ಮಾಧವ :** ನಿಮ್ಮ ದುರುಗವ್ವ ನಮಗೆ ಪಾರ್ವತೀದೇವಿ. ಒಳ್ಳೆ ರೀತಿಯಿಂದ ಇರೋವರಿಗೆ ಏನೂ ಕೆಡಕು ಮಾಡೋದಿಲ್ಲ. ಮಾತು ಕೊಟ್ಟು ತಪ್ಪಿದರೆ ಮಾತ್ರ ದುರಗವ್ವ ತಪ್ಪದೆ ಗೋಣು ಮುರೀತಾಳೆ, ಇರಲಿ. 'ಇಂದಿನಿಂದ ನಾವು ಕುಡಿಯೋ ತಿನ್ನೋ ಚಟಾ ಬಿಡತೇವಿ, ಒಳ್ಳೇ ರೀತಿಯಿಂದ ಇರತೇವಿ' ಅಂತ ಈ ರಾಷ್ಟ್ರದೇವತೆಯ ಇದಿರಿಗೆ ಮೊಳಕಾಲೂರಿ ಪ್ರತಿಜ್ಞಾ ಮಾಡಿರಿ. (ಹರಿಜನರ ಪ್ರತಿಜ್ಞಾವಿಧಿ ಮುಗಿದ ಮೇಲೆ) ಇನ್ನು ಕೊನೆಯದಾಗಿ, ಈ ರಾಷ್ಟ್ರದೇವತೆಗೆ ಮಂಗಲ ಮಾಡೋಣ. ಹೊತ್ತು ಬಹಳ ಆಯ್ತು.

**ಹರಿಜನ :** ಈ ಹನುಮಂತಪ್ಪನೋರ ಊಟ ನಮ್ಮನ್ಯಾಗೇ ಆಗಲ್ರಿಽಽ.

**ಮಾಧವ :** (ನಗುತ್ತ) ಯಾಕೆ, ನನ್ನನ್ನು ಕರಿಯೋದಿಲ್ಲೇನು?

**ಹರಿಜನ :** ನೀವ್ಹ್ಯಾಂಗ ಉಂಡೀರಿ ಬ್ಯಾಂಬ್ರು ಮಾದರ ಮನ್ಯಾಗಽಽ?

**ಮಾಧವ :** ಈಗ ನಿಮ್ಮ ಹನುಮಂತಪ್ಪ ಜಳಾಜಳಾ ಇದ್ದಾರೆ, ವಿದ್ಯಾಬುದ್ಧಿ ಕಲಿತಾರೆ, ಕುಡಿಯೋ ತಿನ್ನೋ ಚಟಾ ಬಿಟ್ಟಾರೆ ಅಂತೂ ಬ್ರಾಹ್ಮಣರೇ ಇದ್ದಂತೆ ಇದ್ದಾರೆ. ನೀವೂ ಇವರಂತೆ ಇರಲಿಕ್ಕಂ ಕಲಿತರೆ ಇವರೂ ನಾವೂ ಕೂಡಿಯೇ ನಿಮ್ಮ ಮನೆಗೆ ಊಟಕ್ಕ ಬರತೇವಿ. ಹುಡುಗಾಟಿಕೆ ಮಾತಲ್ಲ ಇದು; ಮಹಾತ್ಮರ ಇದಿರಿಗೆ ಪ್ರತಿಜ್ಞಾ ಮಾಡಿ ಹೇಳತೇನಿ. ಸಧ್ಯಃ ಹನುಮಂತಪ್ಪ ನಮ್ಮಲ್ಲೇ ಇರತಾರೆ; ಮಾತ್ರ, ದಿನಾಲು ನಿಮ್ಮ ಕೇರಿಗೆ ಬರತಿರತಾರೆ. ಅವರು ಹೇಳಿದಂತೆ ನೀವೆಲ್ಲ ತಪ್ಪದೆ ನಡೀಲಿಕ್ಕೆಬೇಕು.

**ಹರಿಜನ :** ಯಂತಾ ಮಾತ್ರೀಽ; ಹಾಂಗೇ ನಡಕೊಂತೀವಿ.

**ಮಾಧವ :** ಸರಿ. ಇನ್ನೊಂದು ಮಾತು ಹೇಳಿರತೇನಿ; ನಿಮ್ಮಲ್ಲಿ ಯಾರಿಗಾದರೂ ಬೇನೆ ಬೇಸರಿಕೆ ಬಂದರೆ ನನಗೆ ಆ ಕೂಡಲೆ ತಪ್ಪದೆ ತಿಳಿಸಿರಿ. ಡಾಕ್ಟರರನ್ನು ಕರೆತಂದು ಉಪಚಾರ ಮಾಡಸತೇನಿ.

**ಹರಿಜನ :** (ಕೃತಜ್ಞತೆಯಿಂದ) ಯಪ್ಪಾss ಏಟು ದೊಡ್ಡ ಮನ ಸ್ಯಾರ್ರೀ ನೀವುss! ದೇವರು ನಿಮ್ಮ ಕಲ್ಯಾಣ ಮಾಡ್ಲಿ...,

**ಮಾಧವ :** ಮೊದಲು ನಿಮ್ಮ ಕಲ್ಯಾಣ ಆಗಲಿ. ಅದರ ಕೂಡ – ನನ್ನದಷ್ಟೇ ಅಲ್ಲ – ಇಡೀ ಭರತಖಂಡದ್ದೇ ಕಲ್ಯಾಣ ಆಗತದೆ. ಹಾss! ಅಲ್ಲಲ್ಲೇ ಎಲ್ಲರೂ ಎದ್ದು ನಿಲ್ಲಿರಿ. ನಮ್ಮ ರಾಷ್ಟ್ರಮಾತಾ ಭಾರತದೇವಿಗೆ ಮಂಗಲ ಮಾಡೋಣ.

( ಎಲ್ಲರೂ ಎದ್ದು ನಿಲ್ಲುವರು. ಸ್ವಯಂಸೇವಕರು ಜನಗಣಮನ ಅಥವಾ ವಂದೇ ಮಾತರಂ ಗೀತೆಯನ್ನು ಹಾಡುವರು. ತೆರೆ ನಿಧಾನವಾಗಿ ಇಳಿಯುವದು. )

೧ನೆಯ ಅಂಕ ಮುಗಿದುದು.

# ೨ನೆಯ ಅಂಕ

## ಪ್ರವೇಶ ೧

ರಸ್ತೆ—ಕಾಳಾಚಾರಿ, ಶಂಕರ ದೀಕ್ಷಿತ, ವಿರೂಪಾಕ್ಷಯ್ಯ ಮೂವರೂ ದೇವರ ದರ್ಶನ ಮಾಡಿಕೊಂಡು ಮನೆಗಳಿಗೆ ಮರಳುತ್ತಿದ್ದಾರೆ......

**ಶಂಕರ :** ಕಾಳಾಚಾರೀ, ಕಾಲ ಕೆಟ್ಟಿತುಇ ಅಂದೆ...!

**ಕಾಳಾಚಾರಿ :** ಏನರೆ ತುಳಿದಿರೇನು ಮತ್ತೆ ? ಹಳ್ಳಿಯ ಊರು... ಹುಡುಗರು ಬೀದೀಯೊಳಗೇ......

**ಶಂಕರ :** ಅಲ್ಲೋ; ದಿವಸ ಎಂತಾವು ಬಂದುವಲ್ಲ ಅಂತೇನಿ.

**ಕಾಳಾಚಾರಿ :** ಎಂತಾವು ಅಂದರೆ ? ಹಗಲು-ರಾತ್ರಿ ತುಸು ಹೆಚ್ಚು ಕಡಿಮೆ ಆದರೂ ದಿವಸಕ್ಕೆ ಇಪ್ಪತ್ತುನಾಲ್ಕು ತಾಸು ತಪ್ಪೋದಿಲ್ಲವಲ್ಲ !

**ಶಂಕರ :** ವಿರೂಪಾಕ್ಷಯ್ಯನೋರೇ, ಈ ಕಾಳಾಚಾರೀ ಬಾಯಿ ಅಂದರಇ ಒಡಕ ಅಗ್ಗಿಷ್ಟಿಗೇ ಬಾಯಿ ಇದ್ದಾಂಗ. ನಾ ಹೇಳೋದನ್ನ ಕೇಳೋ ಹಾಗಿಲ್ಲ; ಬರೇ ಬೂದೀನೇ ಹಾರಿಸತಾನೆ, ಅಡ್ಡ ಹಾದಿಗೇ ಎಳೀತಾನೆ.

**ವಿರೂಪಾಕ್ಷಯ್ಯ :** ಮತ್ತೆ, ದೀಕ್ಷಿತರೇ, ನೀವೂ ಗುರಿಹೊಡೆದಂತೆ ಮಾತಾಡೋದನ್ನ ಕಲಿತಿಲ್ಲ.

**ಶಂಕರ :** ಅಲ್ಲರೀ, ಈಗಿನ ಹುಡುಗರ ಮಾತು ಹೇಳತೇನಿ.

**ಕಾಳಾಚಾರಿ :** ಸೈರೆಪಾ; ಈಗ ಹಾದಿಗೆ ಬಂದಿರಿ. ಅದನ್ನು ಬಿಟ್ಟು, ಗಡಬಿಡಿಯೊಳಗೇ ಗಂಡನ ಹೆಸರು ಹೇಳಿ ಬಿಡೋಣ ಅಂತ ಒಗಟದ ಒಯ್ಯಾರದೊಳಗೇ ಹೊತ್ತು ಕಳೆಯೋ ಹೊಸಮೊದಲಗಿತ್ತಿ ಹಾಂಗ ಮಾತಾಡಿದರೆ ? ಏನ್ರೀ ಅದು—ಈಗಿನ ಹುಡುಗರ ಮಾತು, ಅಂದಿರಲ್ಲ ?

**ಶಂಕರ :** ಕೇಳೇ ಇಲ್ಲೇನು ? ಈಗಿನ ಹುಡುಗರು ಹೊಲೆಗೇರಿ ಹೊಗತಾರೆ !

ಕಾಳಾಚಾರಿ : ಮತ್ತೆ...ನಿಮ್ಮಂಥ ಮುದುಕರೂ ಹೋಗಬೇಕಂತೀರೇನು ಅಲ್ಲಿ ?

ಶಂಕರ : ಹಾಂಗಲ್ಲೋ ಆಚಾರೀ, ಅವರು ಅಲ್ಲಿ ಧ್ವಜಾ ಹಾರಿಸತಾರೆ.

ಕಾಳಾಚಾರಿ : ತಪ್ಪೇನಾಯ್ತು ? ಧ್ವಜಾ ಊರಿದ್ದರೆ ಆಕ್ಷೇಪ ಮಾಡಬಹುದು.

ಶಂಕರ : ಅಯ್ಯನೋರೇ, ಈಗ ತಿಳಿಯೋದಿಲ್ಲ ಈ ಆಚಾರಿಗೆ; ನಾಳೆ ಆ ಹೊಲೇರು ಬಂದು ಇವರ ಕಾಳಮ್ಮನ ಗುಡಿ ಹೊಕ್ಕರು ಅಂದರೆ......

ವಿರೂಪಾಕ್ಷಯ್ಯ : ಏನ್ ಹೇಳ್ತೀರೀ ? ನಮ್ಮ ಪಂಚಾಯತೀ ಪಗಾರ ತಿಂದು, ಊರ ಕಸಾ ಬಳಿಯೋದು ಬಿಟ್ಟು, ದೇವಾಲಯದ ಮ್ಯಾಲ ದಾಳೀ ಇಡತಾರ ಆ ಹೊಲೇರು ?

ಕಾಳಾಚಾರಿ : ನೋಡೋಣಲ್ಲ, ಅವರು ಹ್ಯಾಂಗ ಬರತಾರೋ !

ಶಂಕರ : ಬರೇ ಅವರೇ ಬರೋದಿಲ್ಲ; ನಮ್ಮ ಸರಪಂಚ ದೇಸಾಯಿ ಶ್ರೀನಿವಾಸರಾಯರ ಮಗ ಮಾಧವರಾಯ ಅವರನ್ನು ಕರೆತರುತಾನೆ. ಅದಕಂತೆ ಹೊಲೆಗೇರಿಗೆ ಹೋಗಿ ಅವರನ್ನು ತಿದ್ದಲಿಕ್ಕೆ ಹತ್ತಿದಾನೆ.

ವಿರೂಪಾಕ್ಷಯ್ಯ : ( ನಗುತ್ತ ) ತಿದ್ದೋದಂದರೆ ? ಕತ್ತೆಯ ಕಿವಿ ಕತ್ತರಿಸಿ ಕುದುರೆಗಳನ್ನು ಮಾಡುತಾನೋ, ಏನು ಕಾಗೆಯ ಮೈಗೆ ಸಬಕಾರ ತಿಕ್ಕಿ ಬೆಳ್ಳಕ್ಕಿಗಳನ್ನು ಮಾಡುತಾನೋ ?

ಕಾಳಾಚಾರಿ : ಅಂಥಾಂಗ, ಹುಡುಗಾಟಿಕೆ ಅಲ್ಲ ಅಯ್ಯನೋರೇ. ಹುಡುಗ ಬಹಳ ಹಟಮಾರಿ. ಹಟಕ್ಕೆ ಬಿದ್ದ ಅಂದರೆ, ಬರೇ ದೇವಸ್ಥಾನದೊಳಗೇ ಯಾಕೆ—ನಮ್ಮ ಅಡಿಗೇ ಮನೆಯೊಳಗೂ......

ವಿರೂಪಾಕ್ಷಯ್ಯ : ತಿಳೀತು. ಆದರೆ ಆಚಾರೀ, ಅವರ ಅಪ್ಪ ಶ್ರೀನಿವಾಸರಾಯ ಕಟ್ಟಾ ಸನಾತನಿ; ದೇವರು ಧರ್ಮ ಅಂದರೆ ಪ್ರಾಣಾ ಕಳಕೊಳ್ಳತಾನೆ. ಇಂಥವರ ಮಗ ಮುಗದಾಣ ಇಲ್ಲದ ಹೋರೀ ಹಾಂಗ ಕುಣಿದಾಡತಾನೆ ಅಂದರೆ, ಬಹುಶಃ ತಂದೆಗೆ ತಿಳಿದಿರಲಿಕ್ಕಿಲ್ಲೇನು ಇದು?

**ಶಂಕರ :** ತಿಳೀದೇ ಏನ್ರೀ? ಇರೋದು ಒಬ್ಬನೇ ಮಗ. ಬೆದರಿಕೆ ಹಾಕಿದರೆ ಮನೆ ಬಿಟ್ಟು ಹೋದಾನಲ್ಲ, ದೀಪಕ್ಕೆ ದಿಕ್ಕಿಲ್ಲಧಾಂಗ ಆದೀತಲ್ಲ ಅಂತ ಸುಮ್ಮನೆ ಇದ್ದಿದ್ದಾರಾದೀತು.

**ಕಾಳಾಚಾರಿ :** ನಮ್ಮ ತರ್ಕ ಬ್ಯಾಡ ಈ ಪ್ರಸಂಗದೊಳಗೆ. ಹೀಗೇ ಹೋಗಿ ಶ್ರೀನಿವಾಸರಾಯರಿಗೆ ಹೇಳಿ ಬಿಡೋಣ. ದೇವರು ಧರ್ಮಗಳ ಇದಿರಿಗೆ ಅವರು ತನ್ನ ಮಗನನ್ನೂ ನೋಡೋವರಲ್ಲ. ಒಂದು ವೇಳೆ, ರಾಯರು ಮಗನ ಪಕ್ಷವನ್ನೇ ಕಟ್ಟಿದರೆ... ನಿನ್ನ ನರಪಂಚಕಿ ಗಿರಪಂಚಕಿ ಆದೀತೂ ಅಂತ ಬೆದರಿಕೆ ಹಾಕೋಣ.

**ವಿರೂಪಾಕ್ಷಯ್ಯ :** ಹಾಗೆ ದುಡುಕೋದು ಬ್ಯಾಡ. ಸ್ವಲ್ಪ ದಿವಸ ತಡೆಯೋಣ. ಮಾಧು ಹೇಗೂ ಹರಿಜನ ಕಾರ್ಯಕವನ್ನು ಮುಂದುವರಿಸ ತಾನೆ. ತಂದೆಗೆ ತಿಳಿಯದೆ ಇರೋದಿಲ್ಲ. ಅವರಾಗಿಯೇ ಅವನಿಗೆ ಕಟ್ಟು ಹಾಕಿದರೆ ತೀರಿಯೇ ಹೋಯ್ತು; ಇಲ್ಲವಾದರೆ ನಾವು ಸಮಯಾ ಸಾಧಿಸಿ ಕಿವಿ ಊದೋಣ.

**ಕಾಳಾಚಾರಿ :** ಆ ಮೊದಲು ಮಾಧವರಾಯನಿಗೆ ಹೇಳಿ ನೋಡೋ ಣೇನು ?

**ಶಂಕರ :** ಅಲ್ಲರೀ ಅಂಥಾ ದೊಡ್ಡ ಸರಕಾರವೇ ಅವರ ಬೆಂಬಲಕ್ಕೆ ಇರುವಾಗ, ನಾವು ಅಂದರೆ, ಅವನ ಕಣ್ಣಿಗೆ ನೊರಜು ಇದ್ದ ಹಾಗೆ. ಅವರಿಗೆ ಪರದೇಶದ ವಿಚಾರಗಳು ತಲೆಯೊಳಗೆ ತುಂಬಿಕೊಂಡಿವೆ. ನಮ್ಮ ಶಾಸ್ತ್ರ-ಪುರಾಣಗಳೊಳಗೆ ಏನು ಹೇಳೇದs, ಭಗವದ್ಗೀತಾದೊಳಗೆ ಶ್ರೀಕೃಷ್ಣ ಪರಮಾತ್ಮ ಜಾತಿs ಬಗ್ಗೆ ಏನು ಹೇಳತಾನೆ, ಅನ್ನೋದು ಏನು ಗೊತ್ತು ಈ ಮುಂಡೇ ಮಕ್ಕಳಿಗೆ! ಮತ್ತ...ಮತ್ತ...ಮತ್...

**ವಿರೂಪಾಕ್ಷಯ್ಯ :** (ನಗುತ್ತ) ಹೌದ್ರೆಪಾs, ನಮಗೂ ಒಂದಿಷ್ಟು ಹೇಳಿ ಬಿಟ್ರೆರ್ರೀsss, ಆ ಶಾಸ್ತ್ರ ಭಗವದ್ಗಿತಾದ ಮಾತುs!

**ಶಂಕರ :** (ಉಗುಳುನುಂಗುತ್ತ) ನಮಗೂ...ಅಂತಂದ್ರ...! ಏನ್ರೆಪಾ ...ಭಗ್...! (ಮುಂದುಗಾಣದೆ) ಹೊತ್ತು ಬಹಳ ಆಯ್ತೇನೋ. ಹೋಗೋಣ ಇನ್ನು ?

ಕಾಳಾಚಾರಿ : (ನಗುತ್ತ) ಶಾಸ್ತ್ರ, ಪುರಾಣ, ಭಗವದ್ಗೀತಾ ಅನ್ನೋ ಶಬ್ದ ಮಾತ್ರ ಚೆನ್ನಾಗಿ ಪರಿಚಿತ ಅವೆ ದೀಕ್ಷಿತರಿಗೆ, ಅಂಥಾಂಗಾತು. (ನಗುವ).

ಶಂಕರ : (ಅಪಮಾನಿತನಾದಂತೆ) ಹಾಂಗಲ್ ಕಾಳಾಚಾರೀs, ನಾವೂ ಪೂರಾ ಕಲೀತಿದ್ವಿ ಏನಪಾ. ನಮ್ಮ ಹಿರೇರು ಸಣ್ಣವರಿರತಾನೇ ತೀರಿ ಕೊಂಡರೇನಪs !

ವಿರೂಪಾಕ್ಷಯ್ಯ : ಅವರು ಸಣ್ಣವರಿರತಾನೇ ತೀರಿಕೊಂಡರೆ ಮತ್ತೆ ನೀವು ಹುಟ್ಟಿ......

ಕಾಳಾಚಾರಿ : (ಅಣಕದಿಂದ) ಏನು ಅಯ್ಯನೋರೇ ನಿಮ್ಮ ತಲೆ ! ಸಣ್ಣವರಿರತಾನೇ ಅಂದರೆ .... .... (ತಿಳಿಸಿ ಹೇಳುವ ತತ್ತ್ವಜ್ಞನಂತೆ) ಈ ಶಂಕರ ದೀಕ್ಷಿತರು ಸಣ್ಣವರಿರತಾನೇ ಇವರ ಹಿರಿಯರು ವೈಕುಂಠಕ್ಕೆ ಗಚ್ಛs ಹೊಡಿಸಿದರು, ಅಂತ ಹೇಳ್ತಾರೆ. ಯಾಕ್ರೀ ದೀಕ್ಷಿತರೇ...? (ಮಾತಿನ ಭರದಲ್ಲಿ ದೀಕ್ಷಿತನ ಎದೆಗೆ ಬಲವಾಗಿ ಗುದ್ದುವನು.)

ದೀಕ್ಷಿತ : (ಎದೆಯನ್ನು ಸಾವರಿಸಿಕೊಳ್ಳುತ್ತ ಮೆಲು ದನಿಯಲ್ಲಿ) ಯಾಕೂ ಇಲ್ರೆಪೋss ! (ಮತ್ತೆ ಮಾತನ್ನು ಬದಲಿಸುತ್ತ) ನಮ್ಮ ತಂದೆ ಯವರ ನೆನಪ್ಪಾಯ್ತು ಅಂದರೆ......ಮಂದಿ ಹೇಳತಾರೆ......ಅವರಂಥ ವಿದ್ವಾಂಸರು ದಿಗ್ದೇಶದೊಳಗೆ ಇದ್ದಿದ್ದಿಲ್ಲ, ಅಂತ, (ಗದ್ಗದಿಸುತ್ತ) ಆ ಮಾತು ನೆನಪಾಯ್ತು ಅಂದರೆ......ಕಣ್ಣೀರು ಧಟಕ್ಕನೆ ಉದರತವೆ ! (ಕಣ್ಣೀರು ಒರೆಸಿಕೊಳ್ಳುವನು).

ವಿರೂಪಾಕ್ಷಯ್ಯ : ಹೋಗಲಿ ಬಿಡಿರಿ; ಆಗಿ ಹೋದ ಮಾತಿಗೆ ಯಾಕೆ ಕೆಡಕು ಅನಿಸಿಕೊಳ್ಳತೀರಿ.

ಕಾಳಾಚಾರಿ : ಅಲ್ಲs, ದೀಕ್ಷಿತರೇ, ತಂದೆ ವಿದ್ವಾಂಸ ಇದ್ದ ಅಂದರೆ, ಮಗ ನಗಬೇಕೋ ಅಳಬೇಕೋ ? ನನ್ನ ಹೊಟ್ಟೆಯೊಳಗೆ ಎಂಥ ದಡ್ಡ ಮಗ ಹುಟ್ಟಿದನಲ್ಲ, ಅಂತ ನಿಮ್ಮ ತಂದೆಗೆ ಬೇಕಾದರೆ ಕಣ್ಣೀರು ಬರಬೇಕು ! ಅಲ್ಲವೇ ಅಯ್ಯನೊರೇ ?

**ವಿರೂಪಾಕ್ಷಯ್ಯ :** ಏನು ಹೇಳತೀ ಆಚಾರೀ ? ಮೆಣಸು ಹುಳಿ ತರೂ ಜೋಳಕ್ಕಿಂತ ಕಡೆ ಅಲ್ಲ ಅನ್ನೋ ಹಾಗಿದ್ದರೆ ದೀಕ್ಷಿತರು. ಸುತ್ತುಽ ಹತ್ತು ಹರಿದಾರಿಯೊಳಗೆ ದೀಕ್ಷಿತರಿಲ್ಲದೆ ಮದುವೆ ಮುಂಜಿವೆ ಶ್ರಾದ್ಧ ಪಕ್ಷ ಯಾವದೂ ಜರಗೋ ಹಾಗಿಲ್ಲ. ಕೋರ್ಟು-ಕಚೇರಿ ಒಳಗ ಯಾವದರೆ ದೊಡ್ಡ ಖಟ್ಲೆ ಬಂದವು ಅಂದರೆ, ದೀಕ್ಷಿತರ ಸಾಕ್ಷಿ ಇದ್ದದ್ದೇ. ಅದನ್ನು ಕಣ್ಣಾರೆ ಕಂಡಿರಬೇಕು, ಅನ್ನೋ ಕಾರಣವೇ ಇಲ್ಲ. ಅಷ್ಟು ಹರತ ದೀಕ್ಷಿತರ ಬುದ್ಧಿ· ಸಾಕಲ್ಲೇನು, ವಿದ್ವಾಂಸರ ಮಕ್ಕಳು ಅನ್ನಿಸಿಕೊಳ್ಳೋದಕ್ಕೆ? ಅದೇ, ದೇಸಾಯರ ಮಗ ಇದ್ದಾನ ನೋಡು; ತಂದೆ ಪಕ್ಕಾ ಧರ್ಮ ಭಕ್ತ; ಮಗ ನಕ್ಕೀ ಧರ್ಮ ಲಂಡ......

**ಕಾಳಾಚಾರಿ :** (ಎಚ್ಚತ್ತವನಂತೆ) ಅಂಥಾಂಗ ದೀಕ್ಷಿತರೇ, ಆ ಮಾಧೂನ್ನ ಹಾದಿಗೆ ತರೋದು ?

**ಶಂಕರ :** ಈಗಲೇ ಏಕೆ ಅಷ್ಟು ಗಡಿಬಿಡಿ. ಮತ್ತೆ ಯಾವಾಗ ಲಾದರೂ ಜಳಕಕ್ಕೆ ಕೂಡತೇವಲ್ಲ, ಆವಾಗ ಮಾತಾಡೋಣಂತ, ಎಲ್ಲಾ ಸರಿಯಾಗಿ. ಈಗ ಹೋಗೋಣ ನಡೀರಿ.

(ಅವರು ಅತ್ತ ತಿರುಗುತ್ತಿರುವಾಗ ಹೊಲೆಯರ ದುರುಗ ಕಸ ಹೊಡೆಯುತ್ತ ರಂಗದ ಮೇಲೆ ಬರುವ.)

**ಕಾಳಾಚಾರಿ :** (ದುರುಗನನ್ನು ದುರುಗುಟ್ಟಿ ನೋಡುತ್ತ) ಅಂಥಾಂಗ, ದೀಕ್ಷಿತರೇ, ಮಾಧೂನ ಹೇಳಿಕೆಯಿಂದ ಈ ಹೊಲ್ಯಾರಿಗೂ ಸೊಕ್ಕು ಬಹಳ ಬಂದದ ನೋಡಿರಿ. ಆಽಽಂ ? ಮಗಽ ನಸಕಲೇ ಎದ್ದು ಕಸಾ ಹೊಡೆಯೋದು ಬಿಟ್ಟು ಎರಡು ತಾಸು ಹೊತ್ತೇರಿ ಬಂದಾನಽಽ ! ಹಾಂಽ ? (ಕಸದ ಧೂಳು ಮೈಮೇಲೆ ಬಂದಂತೆ ಬಟ್ಟೆ ಝಾಡಿಸಿ) ಥೂ, ಹಾಳು ! ಎಲೇ ದುರುಗಾ, ನಿಲ್ಲು ಮಗನೇ ಒಂದಿಷ್ಟು.

**ಶಂಕರ :** ತುಸು ಸರಿ ಆ ಕಡೆಗೆ, ಮರಿ ಆಗಿ ನಿಲ್ಲು. ಅವಿವೇಕ್....

**ದುರುಗ :** ಯಪಾ, ಮುಂಜ್ಯಾಳೆದ್ದು ಹರಿಹರಿ ಅನ್ನೋದು ಬಿಟ್ಟು ಸರಿ-ಮರಿ ಅಂತೀರಲ್ರಿಽಽ, ದೇವರ ಗುಡೀಲಿಂದ ಬರೋ ಮುಂದಽಽ ?

**ವಿರೂಪಾಕ್ಷಯ್ಯ** : (ಅಣಕದ ದನಿಯಲ್ಲಿ) ಹೌದೋ ಏ ಹರೀ ಮಗನೇ, ನಿಮ್ಮಂಥಾ ಹೊಲ್ಯಾರಿಂದ ಕಲೀಬೇಕಾಗೇದ ನಾವಿನ್ನು, ಬುದ್ಧೀನ್ನ! ಸರದು ನಿಲ್ಲು. ದೇವರ ದರ್ಶನ ಮಾಡಿಕೊಂಡು ಹೊರಟೇವಿ. ಹೊಲ್ಯಾರ ನೆರಳು ನಮ್ಮ ಮ್ಯಾಲೆ ಬಿದ್ದರ‍ಽಽ......

**ದುರುಗ** : (ಹೀನ ದನಿಯಲ್ಲಿ) ಒಂದೀಟು ದರ್ಮಕ್ಕ ಮಕಾ ತೋರೀರಿ ತಂದೇಽ. ಬಡವರ‍್ನ ಕಂಡು ಬಾಯಿ ಬಿಡಬ್ಯಾಡ್ರಿ ಸಿಕ್ಹಾಂಗಽ. ನೀವಽ ಹೇಳಿ ಬಿಡ್ರಿ; ಸೂರ್ಯಾ ನಿಮ್ಮ ಬೆನ್ನ ಹಿಂದೆ ಅದಾನು. ಯಾರ ನೆಳ್ಳು ಯಾರ ಮ್ಯಾಲ ಬೀಳತ್ತೇತೋ ನೀವಽ ನೋಡ್ರಿ.

**ವಿರೂಪಾಕ್ಷಯ್ಯ** : ಮಾತಿಗೆ ಮಾತು ಬೆಳಸತೀಯೇನು, ಸತ್ತದನಾ ತಿನ್ನೋ ಮುಂಡೇ ಮಗನೇ......!

**ದುರುಗ** : (ಇದಿರು ಬೀಳುವ ದನಿಯಲ್ಲಿ) ನ್ಯಾಯಮುರೀ ನಮ್ಮನ್ನ ದುಡಿಸಿಗೋತೀರಿ; ಹೊರಬಾರದ್ದೆಲ್ಲ ಹೊರಸತೀರಿ; ಆ ಮ್ಯಾಲ ತಿರುಕರಿಗೆ ಹಾಕಿಧಾಂಗ, ಹಡಿ ಪಾವು ಜ್ವಾಳಕ್ಕೂ ನಾಲದೋಟು ಸಂಬಳ ಕೊಡತೀರಿ. ಅದೀಟರಾಗಽ ಹೇಣ್ತೀ ಮಕ್ಕಳೂ ಬದುಕಬೇಕು; ಮತ್ತ ಬೆಳಕು ಹರದರ ನಿಮ್ಮ ನ್ಯಾಂವೀ ಮಾಡಾಕ ಬರಬೇಕಲ್ರಿ......? ಅಂದವ್ಯಾಗ, ಹೊಟ್ಟೀ ದಸಿಂದ ಸತ್ತ ದನಾ ಆದ್ರೂ ತಿಂತೇವಿ; ಅದೂ ಸಿಗದಿದ್ರ ಮಣ್ಣಾದರೂ ತಿಂತೇವಿ, ಜೀಂವಾ ಹಿಡೀತೇವಿ.

**ಶಂಕರ** : ಅವಿವೇಕನ್ನ ತಂದು. ಆ ಕಡೆಗೆ ನರಿ ಅಂದರೆ, ಅಡ್ಡಗಟ್ಟಿ ಬಂದು ಚರ್ಚಾ ಮಾಡಲಿಕ್ಕೆ ನಿಂತಾನೆ ಮಗ. ನೀವೇನು ಮಾಡೀರಿಽಽ; ಪಂಚಾಯತಿ ಪಗಾರ ಮಾತಾಡಿಸತದೆ ಇದನ್ನೆಲ್ಲ. ಮುನ್ನೋಡಿ ಕಸಾ ಹೊಡೀ ಮಗನೇ—(ದುರುಗ ಕಸಾ ಹೊಡೆಯುವಾಗ ಒಂದು ಕಾಗದ ಹಾರಿ ಆ ತ್ರಿಮೂರ್ತಿಗಳ ಮೈಮೇಲೆ ಹೋಗುವುದು. ಎಲ್ಲರೂ ಒಮ್ಮೆಲೆ ಹಾರಿ ಬೀಳುವರು.) ಥೂ ಥೂ ಥೂಽಽ ಅಯ್ಯನೋರೇ, ಇದೆಲ್ಲ ಆ ಮಾಧೂನ ಚಿತಾವಣಿಽ ಅಂದೆ. ಹೀಂಗೇ ಬಿಟ್ಟರೆ ನಮ್ಮನ್ನೆಲ್ಲ ನುಂಗಿ ನೀರು ಕುಡಿತಾರೆ ಈ ಹೊಲೇರು.

**ಕಾಳಾಚಾರಿ** : ಹೌದು ಅಂದೆ. ನಮ್ಮ ಪಂಚಾಯತಿಯಿಂದ ಬಿಸಿ ಹಚ್ಚಿದರೇ ಬಗ್ಗುತಾರೆ ಇವರು. ಹಾಗೇ ಬಿಟ್ಟರೆ, — ಹೊಲೆಯರು

ಹೊರಗೇ ಯಾಕೆ, ಊರೊಳಗೂ ಇಲ್ಲೇನು? ಅಂತ ಕೇಳೋ ಮಕ್ಕಳು ಇವರು!

( ತೆರೆಯಲ್ಲಿ ಒಂದು ದನಿ : ಡಾಕ್ಟರರೇ, ಹೊಲೆಯ ಹೊರಗಿಹನೆ ಊರೊಳಗಿಲ್ಲವೇ? ಆರಿತು ಆಚಾರವನು ನಡೆಸದಾತನೆ ಹೊಲೆಯ—ಅಂತ ಪೂಜ್ಯ ಪುರಂದರದಾಸರು ಹಾಡಿಕೊಂಡಿಲ್ಲವೇ?

**ಮತ್ತೊಂದು ದನಿ :** ಮಾಧವರಾಯರೇ ಅದೇನೂ ಸುಳ್ಳಲ್ಲ. ಹೊಲೆಯರು ಪಾಪಕ್ಕೆ ಹೆದರಿ ಪ್ರಾಮಾಣಿಕ ಜೀವನವನ್ನು ನಡೆಸುತಾರೆ. ಈ ಮೇಲಿನ ಜಾತಿಯವರಿಗೆ ದೇವರು-ಧರ್ಮಗಳ ಭೀತಿಯೇ ಇಲ್ಲ. ಇವರ ಮಡಿ-ಮೈಲಿಗೆ ಎಲ್ಲಾ ಡಂಭಾಚಾರ, ಅವಿವೇಕ, ಮೋಸಗಾರಿಕೆ...!)

[ ರಂಗಭೂಮಿಯ ಮೇಲಿನ ತ್ರಿಮೂರ್ತಿಗಳು ಆ ದನಿಗಳ ಕಡೆಗೆ ಕಕ್ಕಾವಿಕ್ಕಿಯಾಗಿ ನೋಡುತ್ತಿರುವರು.]

**ಶಂಕರ :** ಅಯ್ಯನೋರೇ, ಆ ಮಾಧೂನೇ ಬರೋ ಹಾಂಗ ಕಾಣ್ತದೆ. ಸುಮ್ಮನೆ ಬೀದಿಯೊಳಗೆ ಯಾಕೆ ಹರಲಿ ಆಗಬೇಕು? ಮೆಲ್ಲನೆ ಜಾರಿಬಿಡೋಣೇನು.

**ಮಾಧವ :** (ಡಾಕ್ಟರರೊಡನೆ ರಂಗದ ಮೇಲೆ ಬರುತ್ತ) ಹರಿಜನರ ಬಗ್ಗೆ ನಿಮಗೆ ಇಷ್ಟು ಕನಿಕರ ಇದ್ದ ಮೇಲೆ ಅವರ ಮನೆಗೆ ಬರೋದಕ್ಕೆ ಏಕೆ ಹೆದರತೀರಿ ?

**ಡಾಕ್ಟರ :** ಊರೊಳಗಿನ ಜಂಭದ ಕೋಳಿಗಳ ಕೂಗಿಗೆ ಹೆದರಬೇಕಾಗತದೆ. (ತ್ರಿಮೂರ್ತಿಗಳು ಕೆಟ್ಟಗಣ್ಣಿನಿಂದ ಅವರನ್ನು ನೋಡುತ್ತ ಅವರ ಹಿಂಬದಿಯಿಂದ ಮೆಲ್ಲನೆ ಜಾರುವರು.)

**ದುರುಗಪ್ಪ :** ( ನಗುತ್ತ) ಶರಣ್ರೀಯಪಾ! ಬೇಶ್ ಹೊಡ್ತಾ ಕೊಟ್ರೀ ಇವರಿಗೆ ದೂರಿಂದಾನೇ! ಹೊಲ್ಯಾರಂದ್ರ ಹಾಂಗ ಹೀಂಗ ಅಂತ ಇನ್ನೂ ಏನೇನೋ ಅನ್ನಾವರಿದ್ರು......

**ಮಾಧವ :** ಕೇಳಿದಿರಾ ಡಾಕ್ಟರರೇ. ಈ ಮೂವರೂ ನಿಮಗೆ ಅರಿಯದವರಲ್ಲ. ಈ ದೀಕ್ಷಿತ, ವಿರೂಪಾಕ್ಷಯ್ಯ ಮಾತಿನೊಳಗ ತುಂಬಾ ಚಪಲ ಇದ್ದಾರ. ಸುಳ್ಳುಸಾಕ್ಷಿ ಹೇಳ್ಳಿಕ್ಕೆ, ಖೊಟ್ಟಿ ಕಾಗದ ಮಾಡಿಸಲಿಕ್ಕೆ

ಕೋರ್ಟು ಕಚೇರಿ ತಿರುಗುತಲೇ ಇರತಾರೆ. ಲಗ್ನ ಮುಂಜಿವಿ ಮುಹೂರ್ತ ಗಳಿಗೂ ಹಾಜರ್! ಗಂಟೆ-ವಾದ್ಯಗಳ ಗದ್ದಲದೊಳಗs—'ಸುಮುಹೂರ್ತೇ ಸಾವಧಾನ'ದ ಬದಲು, 'ಸುಮೂರ್ತೇ ಸಾಯತಾನೆ' ಅಂದರೂ ಅಂದರೇ ! ಈ ಕಾಳಾಚಾರಿs, ಅಕ್ಕಸಾಲಿಗ; ಅಕ್ಕನ ಬಂಗಾರವನ್ನೂ ಬಿಡಲಾರ. ಹೀಗಿದ್ದರೂ ಈ ಮೂವರೂ ಊರೊಳಗೆ ದೊಡ್ಡ ಮನುಷ್ಯರು, ಗ್ರಾಮ ಪಂಚಾಯತಿಯ ಪ್ರತಿಷ್ಠಿತ ಪಂಚರು; ನೀತಿ ಭ್ರಷ್ಟರಾದರೂ ಮೇಲಿನ ಜಾತಿಯವರು! ದುರುಗಪ್ಪ, ಇವರನ್ನು ಹಾಗೇ ಬಿಡಬಾರದು; ಸಮಯ ಸಿಕ್ಕಾಗ ಇವರ ಕೋಡು ಮುರಿಯುತಲೇ ಇರಬೇಕು.

**ದುರುಗಪ್ಪ:** ( ನಿರಾಶೆಯ ದನಿಯಲ್ಲಿ ) ಏನು ಮುರೀತೇವ್ರೀss ಕೋಡು, ನಮ್ಮಂತಾ ಬಡವರುss ! ಬೆಳಗಾಗುತ್ಲೇ ಅವರಿಗೆ ಸಲಾಮು ಹೊಡೀದಿದ್ರs ನಮ್ಮ ಹೊಟ್ಟೆಗೆ ಕೇರು ಹಾಕ್ಕೋಬೇಕಾಗತೇತಿ.

**ಡಾಕ್ಟರ:** ನಿಜವನ್ನೇ ಹೇಳಿದಿ ಈಗ ದುಡ್ಡಿದ್ದವರಿಗೆ ದುರಭಿ ಮಾನದ ಪಿಡುಗು ಬಡಕೊಂಡsದ. ಕಾಸೆರಡು ಕಾಸಿಗೆ ಬಡವರನ್ನು ಬೆಳಗೂ ಬೈಗೂ ದುಡಿಸಿಕೊಳ್ಳೋದುs, ಆಮೇಲೆ—ಆ ಬಡವರಿಗೆ ಧರ್ಮss ಕೊಟ್ಟರೇನೋ ಅನ್ನೋ ಹಾಗೆ— ಅವರಿಗೆ ಇಷ್ಟು ಕೊಟ್ಟೆವಿ, ಇವರಿಗೆ ಅಷ್ಟು ಕೊಟ್ಟೆವಿ, ಅವರವರ ಮನೆತನಾನೇ ಕಾಪಾಡಿದಿವಿ, ಅಂತ ಜಂಭ ಕೊಚ್ಚಿಕೊಳ್ಳೋದು.

**ಮಾಧವ:** ಇದಕ್ಕಾಗಿಯೇ, ದುಡಿಯೋ ಜನ ತಲೆಕೆಟ್ಟು ಸಂಪು ಹೂಡತದೆ. ಇರಲಿ ದುರಗಪ್ಪ, ಹೋಗಿ ಮರಿಯಪ್ಪನಿಗೆ ಹೇಳು— ಈಗ ಡಾಕ್ಟರರು ಬರತಾರೆ ಅಂತ.

(ದುರಗಪ್ಪ ಒಳಗೆ ಹೋಗುವಾಗ ತೆರೆಯಲ್ಲಿ)

[**ಒಂದು ದನಿ:** ಏ ಮುಂಡೇ ಗಂಡಾ, ದೂರ ಹೋಗು; ಮುಟ್ಟಿ ಗಿಟ್ಟೀ.

**ಮತ್ತೊಂದು ದನಿ:** ಅತ್ತೆಯವರೇ, ಅಷ್ಟೇಕೆ ಬೆದರಿಸತೀರಿ ಆ ಬಡವನ್ನs? ಪಾಪs, ಅವ ದೂರ ಸರಿದೇ ಹೋಗುತಿದ್ದಾನೆ. ಅವನು ಹರಿಜನ ಅಂದ ಮಾತ್ರಕ್ಕೇ ಹುಚ್ಚನಾಯಿ ಅಂತ ತಿಳಕೊಂಡೀರೇನು?

**ಮೊದಲಿನ ದನಿ :** ನಿಮಗೇನು ತಿಳೀತದೆ, ಹೊಸ ಹುಡುಗರಿಗೆ, ದೇವರು ಧರ್ಮ ಅಂದರೆ? ಈ ಜನರ ನೆರಳು ಸಹಿತ ನಮ್ಮ ಮೇಲೆ ಬಿದ್ದರೆಽಽ ನಮ್ಮ ಕುಲ ಎಲ್ಲಾ ಹಾರಿ ಹೋಗಿ ಬಿಡತದೆಽಽ...

**ಮತ್ತೊಂದು ದನಿ :** (ನಗೆಯಲ್ಲಿ) ಹಃ ಹ್ಹಃ ಹ್ಹಃ ಹಃಽಽ! ಅಂದರೆಽಽ (ನಗುತ್ತಲೇ) ರವದೆಗಿಂತ ಹಗುರು ಆಯ್ತಲ್ಲರೀ ನಮ್ಮ ಕುಲಽಽ! ಆ ಹರಿ ಜನರದೇ ಕಬ್ಬಿಣದಂಥಾ ಗಟ್ಟಿಕುಲ ಅಂತ ಒಪ್ಪಿಕೋ ಬೇಕಾಯ್ತು...... (ನಗುವು).

**ಮೊದಲಿನ ದನಿ :** ನಡಿ ನಡಿಯೇ; ಬೀದಿಯೊಳಗೆ ಯಾಕೆ ಮಾತಾಡ ಬೇಕು ಇದನ್ನೆಲ್ಲ.]

(ಈ ಮಾತು ನಡೆದಾಗ ಡಾಕ್ಟರ್ ಮಾಧು ಅತ್ತಲೇ ನೋಡುತ್ತಿರು ವರು. ಅದೇ ದಿಕ್ಕಿನಿಂದ ರಮಾದೇವಿ, ಸೀತಕ್ಕ 'ರಂಗದ ಮೇಲೆ ಬರುವರು.)

**ರಮಾದೇವಿ :** ಮಾಧೂ, ಡಾಕ್ಟರರನ್ನು ಎಲ್ಲಿಗೆ ಕರಕೊಂಡು ಹೋಗತೀಯೋ ?

**ಮಾಧವ :** (ತಪ್ಪು ಮಾಡಿದವರಂತೆ) ಇಲ್ಲೆ...ಅಂದರ ಇ...ಲ್ಲೇ... ಒಬ್ಬ ಬಡವನ ಮಗಳಿಗೆ ಜ್ವರ ಬರತವೆ...

**ರಮಾದೇವಿ :** ಮಂದಿಗೆ ಬೇನೆ ಬಂದರೆ ನಿನಗೇಕೋ ಅದರ ಕಾಳಜಿಽ?

**ಮಾಧವ :** ಅಲ್ಲ ಅವ್ವಾ...ಅವ್ವಾ ಅಲ್ಲ...ಅವರು...ಅಂತಂದರ ...ಬಡವರು...ಅಂತಂದರ....ತೀರಾ...

**ರಮಾ :** (ನಗುತ್ತ) ಹೀಂಗ್ಯಾಕ ಎಡವತೀ ಮಾತಿನೊಳಗ? ಹೊಲೆ ಗೇರಿಗೆ ಕರಕೊಂಡು ಹೊರಟೀಯೇನೋ ಅಲ್ಲ?

**ಮಾಧು :** ಇಲ್ಲ...ಹುಂ...ಅಂದರೆ ಆ ನ-ಮ್ಮ...

**ರಮಾದೇವಿ :** ತಿಳಿಯಿತು ಬಿಡೋ! ಹುಚ್ಚ ಇದ್ದೀ ಆತು. ಆ ಆ ಹೊಲ್ಯಾರು ಸತ್ತರೆ ಸರತಿ ಮುಟ್ಟಿತು. ನಮಗ್ಯಾಕೊ ಅದರ ಉಸಾಬರಿ?

ಸೀತಕ್ಕ : ಅತ್ತೆಯವರೇ, ನಿಮ್ಮಂಥ ಮುತ್ತೈದೆಯರು ಈ ಮುಂಜಾವದ ತಂಪು ಹೊತ್ತಿನೊಳಗೆ-ಪಾಪ!-ಆ ಬಡವರಿಗೆ ರಾಪsa ಕೊಡತೀರಲ್ಲ! ಬಡವರನ್ನು ಬದುಕಿಸೋದು ದೇವರು ಮೆಚ್ಚೋ ಮಾತು, ಪುಣ್ಯಕ್ಕೆ ಸಾಧನ!

**ರಮಾದೇವಿ :** ಗಂಡನಿಗೆ ತಕ್ಕ ಹೆಂಡತಿ! ನೀವಿಬ್ಬರೂ ಹೀಗೆ ಆ ಚಾಂಡಾಲರ ಬೆನ್ನು ಕಟ್ಟಿದರೆ, ನಾವು ಜಾತಿಯೊಳಗ ತಲೆ ಎತ್ತಿ ಅಡ್ಡಾಡೋದೇ ಕಠಿನ ಆದೀತು.

ಸೀತಕ್ಕ : ಅತ್ತೆಯವರೇ, ಹರಿಜನರ ಉದ್ಧಾರ ಅಂತ ಮಹಾತ್ಮಾ-ಗಾಂಧಿ ದೇಶದ ತುಂಬಾ ಅಡ್ಡಾಡಿದರು, ಅಸ್ಪೃಶ್ಯತಾ ನಿವಾರಣದ ಪ್ರಚಾರ ಮಾಡಿದರು; ಆ ಕಾರ್ಯಕ್ಕೆ ಎಷ್ಟೋ ಜನರ ಬೆಂಬಲ ಪಡೆದರು; ಹರಿಜನರನ್ನು ತಮ್ಮ ಆಶ್ರಮದೊಳಗss ಇಟ್ಟುಕೊಂಡಿದ್ದರು; ಅವರ ಕೂಡ ಒಂದೇ ಪಂಕ್ತಿಯೊಳಗss ಊಟss ಮಾಡತಿದ್ದರು. ಈಗ ಭಾರತ ಸರಕಾರ ಹರಿಜನೋದ್ಧಾರದ ಸಲುವಾಗಿ ಶಕ್ತಿಮೀರಿ ಪ್ರಯತ್ನ ಮಾಡತದೆ. ಅದಕ್ಕ ಬೆಂಬಲ ಕೊಡೋದು ನಮ್ಮೆಲ್ಲರ ಕರ್ತವ್ಯ. ಇಂಥಾದ್ದರೊಳಗೆ, ಜಾತಿ ಜನರು ನಮ್ಮ ಮೇಲೆ ಬಂದಾಗ ನೋಡೋಣಂತ.

**ರಮಾದೇವಿ :** ನೀ ಹೇಳೋದೆಲ್ಲ ಸರಿಯೆss ! ಆದರೆ ನಿಮ್ಮ ಮಾವಂದಿರು ಕೇವಲ ಸನಾತನಿಗಳು. ಅವರಿಗೇ ಈ ನಿಮ್ಮ ನಡತೆ ಸರಿಬರಲಿಲ್ಲ, ಅಂದರೆ ಆ ಮೇಲೇನು ಮಾಡೋದು? ನಮ್ಮ ಮಾತು ಹಾಗಿರಲಿ ನಿಮ್ಮ ಮಾವ ಸರಪಂಚಗೂ ಇದ್ದಾರೆ. ಆ ಮೇಲೆ ಕಾಯ್ದೆ-ಕಟ್ಟು ಮಾಡಿಸಿ ಹೊಲೇರಿಗೆ ಹೊಟ್ಟೆಗೆ ಹಿಟ್ಟು ಸಿಗದಂತೆ ಮಾಡಿಬಿಟ್ಟಾರು.

ಸೀತಕ್ಕ : ಮಾಂವದಿರು ಸನಾತನಿಗಳು; ಅವರಿಗೆ ದೇವರು ಧರ್ಮಗಳ ಮೇಲೆ ತುಂಬಾ ನಂಬಿಗೆ ಅದೆ ಅಂತ ಒಪ್ಪಿಕೋತೇನಿ. ಅಷ್ಟು ಮಾತ್ರಕ್ಕೇ, ಮಾನವ ಪ್ರಾಣಿಗಳೇ ಆದ ಮಾದಿಗರನ್ನು ಅವರು ನಾಯಿ-ನರಿಗಳಿಗಿಂತ ಕಡೆಯಾಗಿ ತಿಳಿದಾರು, ಅಂತ ನನಗನಿಸೋದಿಲ್ಲ. ಅದು ದೇವರ ಇಚ್ಛೆಗೇ ಹೊರತಾದ ಮಾತು; ಅಲ್ಲದೆ, ಕಾಯ್ದೆ-ಕಟ್ಟು ಮಾಡಿ ಹರಿಜನರಿಗೆ ಕೆಲಸ ಕೊಡದಿದ್ದರೆ, ಆ ಮೇಲೆ ಊರ ಕಸss ಬಳಿಯೋರು ಯಾರು?

**ಮಾಧವ** : ಅವ್ವಾ, ನಿನಗೆ ಆ ಹೆದರಿಕೆ ಯಾಕೆ? ಅಪ್ಪ ಈ ವಿಚಾರ ದೊಗ ಅತ್ತ ಬರಲಿಕ್ಕಿಲ್ಲ. ಒಂದುವೇಳೆ ಬಂದದ್ದೇ ಆದರೆ ನಾನು ಅವರಿಗೆಲ್ಲ ಹೇಳಿಕೋತೇನಿ. ನೀವೀಗ ಮನೆಗೆ ಹೋಗಿರಿ. ನಾನೂ ಬೇಗನೆ ಬರತೇನಿ.

**ರಮಾ** : ಹಾಗೇ ನಾನಾ ಮಾಡಿ ಬಂದು ಬಿಡು ಮತ್ತೆ.ss. ಆಂss.

( ಅತ್ತೆ ಸೊಸೆಯರು ಹೋಗುವರು. )

**ಡಾಕ್ಟರ** : ( ಎಳೆಸಿಕ್ಕಿತೆಂಬ ಆಸೆಯ ದನಿಯಲ್ಲಿ ) ನೋಡಿದಿರಾ ಮಾಧವರಾಯರೇ, ನಿಮ್ಮ ತಾಯಿಯವರಿಗೇ ನಿಮ್ಮ ಕೆಲಸ ಒಪ್ಪಿಗೆಯಿಲ್ಲ. ಎಂದಮೇಲೆ, ಈ ಅಡ್ಡಮಾರ್ಗದಲ್ಲಿ ನಿಮ್ಮೊಡನೆ ನನ್ನನ್ನೂ ಎಳೆಯಬೇಕು, ಅಂತೀರಲ್ಲ!

**ಮಾಧವ** : ಡಾಕ್ಟರರೇ, ಅವರೆಲ್ಲ ಹಳೆಯ ಸಂಪ್ರದಾಯದವರು, ಅದೇ ವಾತಾವರಣದಲ್ಲಿಯೇ ಹುಟ್ಟಿ ಬೆಳೆದವರು. ಅವರ ತಿಳಿವಳಿಕೆಯೊಳಗೆ, ಹರಿಜನರು ಅಂದರೆ ಪಕ್ಷಿಗಳೊಳಗೆ ಕಾಗೆ ಜಾತಿ ಇದ್ದ ಹಾಗೆ. ಆದರೆ, ನಿಮ್ಮಂಥ ಸುಶಿಕ್ಷಿತರಲ್ಲಿ ಈ ತರದ ತಿಳಿವಳಿಕೆ ಬರಬಾರದು.

**ಡಾಕ್ಟರ** : ಅಲ್ಲರೀ; ನಾನೂ ಇಲ್ಲಿ ಹೊಸದಾಗಿ ಪ್ರ್ಯಾಕ್ಟೀಸ್ ಆರಂಭ ಮಾಡಿದೇನೆ. ಹೊಸ ಡಾಕ್ಟರರು ಅಂದರೇನೇ ಮೊದಲಿಗೆ ಜನಾ ನಂಬೋದಿಲ್ಲ. ಕೊಂದರೂ ಸರಿಯೇ— ಹಳೇ ಡಾಕ್ಟರರ ಹತ್ತಿರ ಹೋಗಿಯೇ ಸಾಯತಾರೆ. ಈಗೀಗ ದೇವರ ದಯೆಯಿಂದ ಪೇಶಂಟ್ಸ ಒಂದೊಂದಾಗಿ ಬರತಾ ಅವೆ. ಅದರೊಳಗ ಮುಕ್ಕಾಲುಭಾಗ ಹಳ್ಳಿಯ ಗಿರಾಕಿಗಳೇ. ಹರಿಜನರು ಅಂದರೆ ಹತ್ತುಮೊಳ ಹಾರಿ ನಿಲ್ಲೋಜನ ಅದು. ನಾನು ಹೊಲೆಗೇರಿಯೊಳಗೆ ಹೋಗತೇನಿ ಅಂತ ಗೊತ್ತಾಗಿ ಬಿಟ್ಟರೆ...ಆಯಿತಲ್ಲ...ಅವರೆಲ್ಲ ದೂರಕ್ಕೆ ದೂರವೇ ಹೋಗಿಬಿಡತಾರೆ.

**ಮಾಧವರಾಯ** : ನಿಮ್ಮಂಥ ಸುಶಿಕ್ಷಿತರೂ ಇಷ್ಟು ಮಟ್ಟಿಗೆ ಆತ್ಮವಿಶ್ವಾಸವಿಲ್ಲದೆ ಮಾತಾಡೋದು ಮಹಾ ಆಶ್ಚರ್ಯ, ದೇಶದ ದುರ್ದೈವ! ನೀವು ಡಾಕ್ಟರೀ ಕಲಿಯುವಾಗ ಎಂಥೆಂಥ ಹೀನ ಪ್ರಾಣಿಗಳನ್ನು ಮುಟ್ಟುತಿದ್ದಿರಿ, ಕೊಯ್ದು ಕೊರೆದು ನೋಡುತಿದ್ದಿರಿ—ನೆನೆಪಿದೆಯೇ ಡಾಕ್ಟರರೇ?

ಆ ಕ್ರಿಮಿಕೀಟಕಗಳಿಗಿಂತಲೂ ಕೀಳಾಗಿ ಕಾಣುತ್ತಿವೆಯೇ ನಿಮಗೆ, ಈ ಹರಿಜನ ಮನುಷ್ಯ ಪ್ರಾಣಿಗಳು? (ನಿಟ್ಟುಸಿರು ಬಿಡುವನು.)

**ಡಾಕ್ಟರ :** (ಪ್ರಾಮಾಣಿಕತೆಯಿಂದ) ಮಾಧವರಾಯಾ, ನನ್ನ ಸದಸದ್ವಿವೇಕವನ್ನು ಎಚ್ಚರಿಸಿ ಹೇಳೋದಾದರೆ—ಎಂದೋ ಯಾರದೋ ತಪ್ಪಿನಿಂದ ಅಸ್ಪೃಶ್ಯರಾಗಿ ಊರಹೊರಗೆ ಉಳಿದ ಜನರ ಸಂತತಿ ಎಂದು ಈಗಿನವರನ್ನೂ ಊರಿಂದ ದೂರವಿಡುವದಕ್ಕೆ—ಅಸ್ಪೃಶ್ಯರೆಂದು ತಿರಸ್ಕರಿಸುವದಕ್ಕೆ ನನ್ನ ಒಪ್ಪಿಗೆ ಇಲ್ಲ. ಹರಿಜನರನ್ನು ಮುಟ್ಟುವದಕ್ಕೆ ನನ್ನ ಭಿನ್ನಾಭಿಪ್ರಾಯವಿಲ್ಲ; ಆದರೆ ಲೋಕಮತದ ವಿರುದ್ಧ ಹೋಗುವದು ಎಂಥವರಿಗೂ ಜಡ ಅನಿಸುತದೆ. ಸೀತಾದೇವಿ ಪರಮ-ಪವಿತ್ರ ಇದ್ದಾಳೆ ಅಂತ ತಿಳಿದಿದ್ದರೂ ಲೋಕಾಪವಾದಕ್ಕೆ -ಒಬ್ಬ ಅಗಸನ ಮಾತಿಗೆ- -ಅಂಜಿ ಆಕೆಯನ್ನು ಬಿಡಬೇಕಾಯಿತು, ಶ್ರೀ ರಾಮಚಂದ್ರ. ಆದ್ಯ ಶಂಕರಾಚಾರ್ಯರೂ ಹೇಳಿಲ್ಲವೇ—ಯದ್ಯಪಿ ಶುದ್ಧಂ ಲೋಕವಿರುದ್ಧಂ ನಾಕರಣೀಯಂ ನಾಚರಣೀಯಂ-ಎಂದು ?

**ಮಾಧವ :** ( ತಾರ್ಕಿಕನ ರೀತಿಯಲ್ಲಿ) ಡಾಕ್ಟರರೇ, ಆಚಾರ್ಯರು ಯಾವುದೋ ಪ್ರಕೃತ ಪ್ರಸಂಗಕ್ಕೆ ತಕ್ಕಂತೆ ಈ ಮಾತನ್ನು ಹೇಳಿರಬಹುದು. ಆದರೆ ಪ್ರಸಂಗ ಯಾವುದು ಅನ್ನೋದನ್ನು ಹೇಳದೆ ಅದೊಂದೇ ಮಾತನ್ನು ಉದ್ಧರಿಸಿದರೆ—ಇದಿರಾಳಿಗಳ ಬಾಯನ್ನು ಕಟ್ಟಬಹುದು; ಹೊರತಾಗಿ, ವಿವೇಕದ ಮತಿಗೆ ಮಂಕುಬೂದಿಯನ್ನು ಎರಚಲು ಸಾಧ್ಯವಾಗಲಾರದು ! ಈಗ ನಿಮ್ಮ ಉದ್ಯೋಗದ ಮಾತನ್ನೇ ಹೇಳತೇನೆ! ಆಯರ್ನ ಟಾನಿಕ್ ಶಕ್ತಿಯನ್ನು ಬೆಳೆಸೋದಕ್ಕೆ ಒಳ್ಳೇದು, ಅಂತ ನೀವು ಯಾರೋ ಒಬ್ಬರಿಗೆ ಹೇಳತಿರತೀರಿ. ವೈದ್ಯವಿದ್ಯೆ ಗೊತ್ತಿಲ್ಲದವನೊಬ್ಬ ಆ ಮಾತನ್ನು ಕೇಳಿಕೊಂಡು, ಆ ಮಾತಿನ ಪ್ರಸಂಗವನ್ನು ತಿಳಿದುಕೊಳ್ಳದೆ, ನೀರನ್ನು ಕೂಡ ಅರಗಿಸಿಕೊಳ್ಳಲಾರದ ಕ್ಷಯರೋಗಿಗೆ ಆ ಟಾನಿಕ್ ಕೊಟ್ಟರೆ ರೋಗಿಯ ಗತಿ ಏನಾದೀತು? ಇದೂ ಹೋಗಲಿ. ಈಗ ನಿಮ್ಮ ವಿವೇಕ ಹೇಳತದೆ—ಹರಿಜನರನ್ನು ಮುಟ್ಟಬೇಕು—ಅಂತ; ಆದರೆ ರೂಢಿ ಹೇಳತದೆ—ಹರಿಜನರನ್ನು ಮುಟ್ಟಬಾರದು—ಅಂತ. ಈ ಸಂದಿಗ್ಧ ಪ್ರಸಂಗದೊಳಗೆ—ಸತಾಂ ಹಿ ಸಂದೇಹ ಪದೇಷು ವಸ್ತುಷು। ಪ್ರಮಾಣಮಂತಃಕರಣ

ಪ್ರವೃತ್ತಯಃ— ಎಂದು ನಾನು ಕವಿಶ್ರೇಷ್ಠ ಕಾಲಿದಾಸರ ಮಾತನ್ನು ಮುಂದಿಡಬಹುದಲ್ಲವೆ?

**ಡಾಕ್ಟರ :** ಹರಿಜನರ ಬಗೆಗೆ ಸಹಾನುಭೂತಿಪರವಾದ ನನ್ನ ಅಂತಃಕರಣ ಪ್ರವೃತ್ತಿಯನ್ನು ಆಗಲೇ ಹೇಳಿರುವೆನಲ್ಲವೇ!

**ಮಾಧವ :** ಸಂತೋಷ! ಎಂದಮೇಲೆ, ವಿವೇಕಕ್ಕೆ ಒಪ್ಪುವ ಕೆಲಸವನ್ನೇ ಮಾಡಿದರಾಯಿತಲ್ಲ!

**ಡಾಕ್ಟರ :** ಆದರೆ, ಮಾಧವರಾಯರೇ, ಈ ಪ್ರಸಂಗದಲ್ಲಿ ನನ್ನ ಸ್ವಂತದ ಮತ್ತು ನನ್ನನ್ನು ಅವಲಂಬಿಸಿದ ನಾಲ್ಕಾರು ಜೀವಿಗಳ ಉಪಜೀವನದ ಪ್ರಶ್ನೆಯನ್ನು ನಾನು ವಿಚಾರಿಸಬೇಕಲ್ಲವೇ ?

**ಮಾಧವ :** ( ಉದ್ವಿಗ್ನತೆಯಿಂದ ) ಈಗ ಅಂತರಂಗವನ್ನು ಬಿಚ್ಚಿ ಹೇಳಿದಿರಿ. ಡಾಕ್ಟರರೇ, ಮೇಲಿನ ಜಾತಿಯವರ ದುರಾಗ್ರಹಕ್ಕಾಗಿ ಭಾರತದಲ್ಲಿ ಅನನ್ಯಗತಿಕರಾಗಿ ಬಿದ್ದಿರುವ ಏಳೆಂಟು ಕೋಟಿ ಜನರ ಉದ್ಧಾರಕ್ಕಿಂತಲೂ ನಿಮ್ಮ ಸ್ವತಃದ ನಾಲ್ಕಾರು ಹೊಟ್ಟೆಗಳನ್ನು ಹೊರೆಯುವದು ನಿಮಗೆ ಮಹತ್ತ್ವದ್ದಾಗಿ ಕಾಣುತ್ತಿದೆಯಲ್ಲವೆ ? ನಿಮ್ಮಂಥ ಸುಶಿಕ್ಷಿತರು, ದೇಶದ ಆಗುಹೋಗುಗಳ ಹೊಣೆಗಾರರು, ಜಾಗತಿಕ ಏಳು-ಬೀಳುಗಳನ್ನು ಬಲ್ಲವರು ಇಷ್ಟೊಂದು ಸಂಕುಚಿತ ಕ್ಷೇತ್ರದಲ್ಲಿ ಮಾತನಾಡುವುದನ್ನು ಕೇಳಿದರೆ, ನೀರು ಬಾರದ ಕಣ್ಣುಗಳಲ್ಲಿಯೂ ನೆತ್ತರ ಚಿಮ್ಮುವಂತಾಗುತ್ತದೆ! ಭಾರತಮಾತೇ, ನಿನ್ನ ಸುಶಿಕ್ಷಿತ ಸಂತಾನಕ್ಕೆ ಕೂಡ ಪತಿತೋದ್ಧಾರದ ವಿಶಾಲ ಹೃದಯವಿಲ್ಲವಾಯಿತೇ...?

ಪದ— ರಾಗ. ಚಾಂದ ತಾಳ, ತೀನತಾಳ

ಭಾರತಮಾತೆಯೆ ತವಸಂತಾನಕೆ ।
ಸಾರ ದಯಾಗುಣ ಬಾರದ ದೇಕೆ? ॥ಪಲ್ಲ॥

ಹರಿಜನ ಸಂತತಿ ಪರಿಪರಿ ಬವಣಿಗೆ ।
ಗುರಿಯಾಗಿರುವದು ಕಾಣದೆ ನಿನಗೆ ॥ ೧

ಸರ್ವರ ಹೃದಯವೆ ಸಮರಸಭಾವದೆ
ಉರ್ವರೆ ಯಾಗಲಿ, ಬೇಡುವೆ ಜವದೆ ॥ ೨ ॥

**ಡಾಕ್ಟರ :** ( ಒಮ್ಮೆಲೆ ಮಾಧುವಿನ ಕೈಗಳನ್ನು ಹಿಡಿದು ಮಂಡಿ ಯೂರಿ ) ಮಾಧು, ಮಾಧವಾ, ನನ್ನ ದೇವದೇವಾ, ಈ ಪಾಮರನ ತಪ್ಪುಗಳನ್ನು ಮನ್ನಿಸಿಬಿಡು. ನಿನ್ನನ್ನು ಒಬ್ಬ ಊರ ಉಡಾಳನೆಂದು ತಿಳಿದಿದ್ದೆ. ನಿಜಕ್ಕೂ ನೀನೇ ಭಾರತ ಮಾತೆಯ ಪುತ್ರ! ಮಾನವತೆಯ ಮಾದರಿಯ ಮೂರ್ತಿ! ನನ್ನ ವಿಚಾರಗಳೆಂದರೆ, ಹಣ್ಣಿನ ತಿರುಳನ್ನು ತೆಗೆದೊಗೆದು ಸಿಪ್ಪೆಯನ್ನು ಸೇವಿಸಿದಂತೆ! ಮುತ್ತುಗಳನ್ನು ಮಣ್ಣು ಗೂಡಿಸಿ ಸಿಂಪುಗಳನ್ನು ಸ್ವೀಕರಿಸಿದಂತೆ! ನಿನ್ನಿಂದ ನಾನು ದಿವ್ಯ ತೇಜಸ್ಸನ್ನು ಕಂಡೆ! ಇನ್ನು ನೀನು ಕರೆದಲ್ಲಿ ಬರುವೆ, ನೀನು ಹೇಳಿದ ಕೆಲಸವನ್ನು ಮಾಡುವೆ. ಕೇವಲ ಹರಿಜನರ ಕೇರಿಯಲ್ಲಷ್ಟೇ ಏಕೆ, ರೌರವ ನರಕದಲ್ಲಿ ಕೆಲಸಮಾಡುವದಕ್ಕೆ ಹೇಳಿದರೂ ಸಿದ್ಧ! ನನ್ನ ಚಿಂತೆ, ನನ್ನ ಸಂಸಾರದ ಚಿಂತೆ ಆ ಭಾರತ ಮಾತೆಗೆ! ಆ ದೇವಾಧಿದೇವನಿಗೆ! ಮಾಧೂ, ನಾನೇನಾದರೂ ನಿನ್ನ ಮನಸ್ಸನ್ನು ನೋಯಿಸಿದ್ದರೆ ಕ್ಷಮಿಸಿಬಿಡು!

**ಮಾಧು :** (ಆತನನ್ನು ಎಬ್ಬಿಸಿ) ಎಲ್ಲರನ್ನೂ ಕ್ಷಮಿಸುವ ಶಕ್ತಿ ಆ ದೇವಾಧಿದೇವನದು. ಮನುಷ್ಯರೆಲ್ಲರೂ ತಪ್ಪು ಮಾಡುವ ಪ್ರಾಣಿಗಳು. To err is human, to forgive is divine! ವೇಳೆಯಾಯಿತು. ನಡೆಯಿರಿ, ಆ ಬಡಪ್ರಾಣಿಗಳು ಎಷ್ಟು ಚಡಪಡಿಸುತ್ತಿವೆಯೋ!

( ಹೋಗುವರು )

## ಪ್ರವೇಶ ೨

**ಸನ್ನಿವೇಶ**—ಹರಿಜನ ಮರಿಯಪ್ಪನ ಗುಡಿಸಲು. ಮುರುಕ ಹೊರಸಿನ ಮೇಲೆ ಆತನ ಮಗಳು ಲಕ್ಷ್ಮಿ ಮಲಗಿದ್ದಾಳೆ; ಆಯಾಸದಿಂದ ಉರುಳಾಡುತ್ತಿದ್ದಾಳೆ. ತಂದೆ ವಿಷಣ್ಣ ವದನದಿಂದ ಹತ್ತಿರದಲ್ಲಿಯೇ ನಿಂತಿದ್ದಾನೆ. ಮತ್ತೊಂದು ಬದಿಯಲ್ಲಿ ಹನುಮಂತಪ್ಪ ಮತ್ತು ಮತ್ತೊಬ್ಬ ಸ್ವಯಂಸೇವಕ.

**ಲಕ್ಷ್ಮೀ :** ( ನರಳುತ್ತ ) ಯಪ್ಪಾss ಯೆಪ್ಪಾsss! ಅಯ್ಯೋss ಅಯ್ಯೋsss! ನೀರುsss ನೀರುsss......

ಮರಿಯಪ್ಪ : ಯಾಕಪ್ಪಾss, ಏಟು ಸಂಗಟಾ ಪಡತೀಯಲ್ಲೀ ನನ್ನಪ್ಪಾss ! ನೀರು ಕೊಡಬೇಕೋ ಬ್ಯಾಡೋss ! ದಾಗದಾರು ಬರತಾ ರಂತಾ ದುರಗ ಹೇಳಿ ಏಟು ಹೊತ್ತಾತು. ಇನ್ನೂ ಬರಲಿಲ್ಲ ಅಪರುss

ಲಕ್ಷ್ಮೀ : ಯಪಾss ನೀರುsss. (ಹೊರಳಾಡುವಳು).

ಹನುಮಂತಪ್ಪ ಹೊರಳಾಡಬೇಡಮ್ಮಾss. ಈಗ ಬರತಾರೆ ಡಾಕ್ಟರರು. ಮಾಧವ ರಾಯರೇ ಕರಕೊಂಡು ಬರತಾರೆ.

ಲಕ್ಷ್ಮೀ : ಯಪ್ಪಾs, ಬಡವರಿಗೆ ಬ್ಯಾನಿ ಬರಬಾರದು, ಬಂದರ ಬದುಕಬಾರದು. ಡಾಕ್ಟರ ಬಂದರ ಅವರಿಗೆ ಕೊಡಾಕ ದುಡ್ಡೊಂದು ಬೇಕಲ್ಲರೀss! ಅಯ್ಯೋss ಉರಿss ಉರಿss!

ಮರಿಯಪ್ಪ : ಎದೀ ಒಡಕೋ ಬ್ಯಾಡ ನನ್ನ ಮಗಳss. ಕೊಡಾಕ ದುಡ್ಡು ಇಲ್ಲದಿದ್ದರ ಅವರು ಹೇಳಿದ ಚಾಕರಿ ಮಾಡಿ ಮುಟ್ಟಿಸತೇನಿ. ಅದೂ ಆಗದಿದ್ದರ ಮುಂದಿನ ಜಲಮದಾಗ ಅವರ ಮನೀ ಮುಂದಿನ ನಾಯಾಗಿ ಹುಟ್ಟಿ ಅವರ ಮನೀಕಾದು ರಿಣಾ ಮುಟ್ಟಿಸತೇನಿ. ನೀ ಬದುಕಿದರ ನಾಕು ಯಪ್ಪಾss; ಎದೀ ಒಡೀ ಬ್ಯಾಡss!

ಹನುಮಂತಪ್ಪ : ಮರಿಯಪ್ಪ, ನೀನೇನೂ ಕಾಳಜಿ ಮಾಡಬೇಡ. ಲಕ್ಷ್ಮೀಗೆ ಗುಣs ಆಗತದೆ. ಯಾವುದಕ್ಕೂ ಮಾಧೂರಾಯರು ಎದೀ ಒಡ್ಡಿನಿಂತಾರ. ನೀ ಯಾಕ ಎದೀ ಒಡೀತೀ? ಅಮ್ಮಾ ಲಕ್ಷ್ಮೀ, ಸುಮ್ಮನೆ ಮಲಗಿಕೋ.

ಲಕ್ಷ್ಮೀ : ತಡೀಲಾರೆನ್ರೀss, ಉರಿ, ಉರಿss, ತಡೀಲಾರೆ; ನೀss ರೂss; ದೇವರs ಯಾಕರ ಬದಕಿಸಿದೀ ಯಪ್ಪಾ ಈ ಬಡವರ್ನss! ನೀರುss

ಮರಿಯಪ್ಪ : ನೀರು, ನೀರುss ! ಬೇಕಾದ ಹೊತ್ತಿಗೆ ಹೋಗಿ ತಂದೇವಂದ್ರ ಆಗಾಂಗಿಲ್ಲ ಈ ಹೊಲಿ ಜಲಮಕ್ಕ. ಮ್ಯಾಲಿನ ಜಾತೇರು ನಮ್ಮನ್ನ ಬಾವಿ ಎಡಾ ಬಲಾ ಹಾಯಗೊಡ್ಸದಿಲ್ಲ. ನೀವs ಒಂದು ಕೊಡಾ ಹಾಕ್ರೀ ಅಂದರೂ ನಮ್ಮ ಕಡೀಗೆ ಕಣ್ಣೆತ್ತಿ ನೋಡಾಕಿಲ್ಲ. ನೀರು, ನೀರು! ಈ ಹೊಲ್ಯಾರ ಪಾಲಿಗೆ ಕಣ್ಣೀರ ಹೊರತು ಮತ್ತೆಲ್ಲೈತಿ ನೀರುss. ತಂಗಳ ನೀರು ಮನ್ಯಾಗ ಅದಾವ. ಕೊಡಬೇಕೋ ಬ್ಯಾಡೋ. ದಾಗದಾರ್ರೂ ಬರಲಿಲ್ಲ.

**ಹನುಮಂತಪ್ಪ** : ಅಂತಾ ನೀರು ಕೊಡಬಾರದಪಾ, ತುಸು ತಡಿ; ಡಾಕ್ಟರ ಬರತಾರೆ. ಅವರು ಹೇಳಿದಂತೆ ಮಾಡೋಣ.

**ಲಕ್ಷ್ಮೀ** : ತಡೀಲಾರೆಽಽ ಉರೀಽಽ ಯಪ್ಪಾ ನೀರು ಕೊಡಪ್ಪಾಽಽಽ.

**ಮರಿಯಪ್ಪ** ತಡೀ ನನ್ನವ್ವಽಽ ! ಆ ತಂಗಳ ನೀರನೇ ತರತೇನಿ. ದುರುಗವ್ವನ ದಯಾ ಇದ್ದಾಂಗ ಆಗಲಿ. (ನೀರನ್ನು ಒಂದು ಪರಟೆಯೊಳಗೆ ಬಗ್ಗಿಸಿ ತರುತ್ತಾನೆ. ಹೊರಸಿನ ಹತ್ತಿರ ಹೋಗುತ್ತಾನೆ. ಲಕ್ಷ್ಮಿಗೆ ಕುಡಿಯಲು ನೀರನ್ನು ಮುಂದೆ ಮಾಡಿದಾಗ ಡಾಕ್ಟರ,ಮಾಧವರಾಯ ಬರುತ್ತಾರೆ.)

**ಮಾಧವ** : ಏ ಏ ಏ ಏ ಮರಿಯಪ್ಪಾಽ, ಏನದು ಕೊಡೋದು ಮಗಳಿಗೆ ? ತುಸು ತಡಿ.

**ಮರಿಯಪ್ಪ** : ದ್ಯಾವ್ರೂ ಬಾಳಽ ಉರಿ ಅಂತ ಹೊಳ್ಳ್ಯಾಡತಾಳ್ರೀ. ನೀರು ಕೊಡತೇನಿ.

**ಡಾಕ್ಟರ** : ನೀರು ಯಾವಾಗ ತಂದದ್ದು ಅದು ? ಕಾಯಿಸಿ ಆರಿಸೀಯೇನು ?

**ಮರಿಯಪ್ಪ** : ತಂದು ಮೂರು ದಿನಾ ಆತ್ರೀ. ಕಾಯಿಸೇನಂದರ ಕಟಿಗೀ ತಂದಿಲ್ರೀ ಅಡಿವೀಗೆ ಹೋಗಿ. ಮಗಳ ಹತ್ತರಾ ಸುಮಾಕ ದೆವ್ವ ಬಡಧಾಂಗ ಕುಂತು ಬಿಟ್ಟೇನಿ. ಹಡದ ತಾಯಿ ಇದ್ರ ಎಲ್ಲಾ ನೋಡಿಕೊಂತಿದ್ಲು. (ಗದ್ಗದ ಸ್ವರದಲ್ಲಿ) ಪರದೇಶ ಮಗಳ್ರೀ ತಂದೇ, ತಾಯಿಲ್ಲದ ತಬ್ಬಲಿ ರೀ (ಕಣ್ಣೀರು ಒರೆಸಿಕೊಳ್ಳುವನು).

**ಡಾಕ್ಟರ** : ಬ್ಯಾನಿಯವರ ಹತ್ತರ ಕೂತು ಕಣ್ಣೀರು ತೆಗೀಬಾರದಪ್ಪಾ ದೇವರದಯಾ ಇರೋತನಕ ಯಾರೂ ಪರದೇಶಿ ಅಲ್ಲ; ಯಾರೂ ತಬ್ಬಿಲಿ ಆಗೋದಿಲ್ಲ. ನಿನ್ನ ಮಗಳಿಗೆ ಗುಣ ಆಗತದೆ. ನೀ ಏನೂ ಚಿಂತೆ ಮಾಡಬೇಡ. ಸ್ವಲ್ಪ ತಡಿ, ನಾನೆಲ್ಲ ನೋಡತೇನಿ.

( ಡಾಕ್ಟರ ಪರೀಕ್ಷೆ ಮಾಡಹತ್ತುವರು. )

**ಲಕ್ಷ್ಮಿ** : (ಬಡಬಡಿಸುವಳು)ಏವ್ವಾಽ ಹೀಂಗ್ಯಾಕ ಬೆದರಸತೀರೀಽಽ! ಮಳೀ ಬರಾಂಗ ಆಗೇತಿ, ತಡಾ ಮಾಡ್ಬ್ಯಾಂಗ ಇಲ್ರೆವಾ, ಮನ್ಯಾಗ ನಮ್ಮಪ್ಪ ಉಣ್ಣಾಕ ಕುಂತಾನ. ಕುತ್ತಿಗ್ಗೆ ಸಿಕ್ಕಾಗ ಕುಡಿದೇನಂದರ ಒಂದು ಹನೀನೂ

ನೀರು ಇಲ್ರೆವ್ರಾ ಮನ್ಯಾಗss. ಒಂದss ಕೊಡಾ ಸೇದಿಕೊಂಡು ಹೋಕ್ಕೀ ನ್ರೆವ...! ಇಲ್ರೆವ್ರಾ ನಿಮ್ಮನ್ನ ಮುಟ್ಟsದಿಲ್ಲ. ನೀವss ಒಂದು ಕೊಡಾ ಹಾಕಿಬಿಡ್ರಿ, ನಾ ದೂರss ಕುತಗೊಂತೇನಿ....ಯಪ್ಪಾ, ಯಪ್ಪಾ ಯಾರೂ ಮಾತಾಡsದಿಲ್ಲಲ್ರೆವ್ರಾ...ಅಯ್ಯಯ್ಯೋ ! ಹನಿ ಉದರಾಕ ಹತ್ತಿದುವು... ದೇವರss ಈ ಹೊಲ್ಯಾರ ಜಾತಿ ಯಾಕ ಹುಟ್ಟಿಸಿದೋ ಯಪ್ಪಾss ! ಮಳೀ ರಾಜಾ,...ಒಂದು ಸಿಡ್ಲು ಹೊಡತಾ ಹೊಡದು ನಮ್ಮ ಹೊಲೆಗೇರೀನೆಲ್ಲಾ ಸುಟ್ಟು ಬಿಡಬಾರದss!

**ಡಾಕ್ಟರ :** ಮರಿಯಪ್ಪಾ, ಏನಿದು ಮಗಳು ಬಡಬಡಿಸೋದು ?

**ಮರಿಯಪ್ಪ :** ದಣೇರೇ, ಮೂರು ದಿನದ ಹಿಂದ ನೀರಿಗೆ ಹೋಗಿದ್ದಳ್ರೀ. ಯಾರೂ ಬಾವೀ ಸನೇಕ ಹಾಯಗೊಡಲಿಲ್ಲಂತ; ತಾವೂ ನೀರು ಹಾಕಲಿಲ್ಲಂತ. ಎಲ್ಲಾರೂ ಹೋಗೋತನಕ ತಡದು ತೊಪ್ಪನ ತೋಯಿಸಿಗೊಂಡು ನಡಗಿಕೋಂತಾ ಅತಗೋಂತಾ ಬಂದಳ್ರೀ ಮನೀಗೆ. ಹಾಂಗss ಹಾಸಿಗೀ ಹಿಡದಾಳ. ಅವತ್ತಿನಿಂದಾ ಜರಾ ಬೆಂಕಿ ಕಾಧಾಂಗ ಕಾಯತಾವು, ಕೂಳಿಲ್ಲ, ನೀರಿಲ್ಲ......!

**ಮಾಧವ :** (ಉದ್ವೇಗ ನಿರಾಶೆಗಳಿಂದ) ಈ ಜಾತಿಯ ಜಂಭದ ಕೋಳಿಗಳಿಗೆ ಇಂಥಾ ಬಡ ಹುಳಗಳು ಇನ್ನೆಷ್ಟು ಬಲಿಯಾಗಬೇಕೋ ! ದೇವರು ದಯಾಮಯ, ಎಂದು ಶಾಸ್ತ್ರಗಳು ಸಾರುತ್ತವೆ. ಆದರೆ ಈ ಜಾತೀಯತೆಯ ಬಹಿಷ್ಕಾರಕ್ಕೆ ಬೆದರಿ ಅವನಲ್ಲಿಯೂ ದಯೆಯ ಸೆಲೆ ಸುಟ್ಟು ಹೋಯಿತೋ ಏನೋ ? ಡಾಕ್ಟರರೇ, ಜ್ವರ ಎಷ್ಟಿವೆ ? ಯಾವ ತರದವು ? ಏನಾದರೂ—

**ಡಾಕ್ಟರ :** ಯಾರೂ ಏನೂ ಬೆದರುವ ಕಾರಣವಿಲ್ಲ. ಇವು ಶೀತ ಜ್ವರ. ಮರಿಯಪ್ಪಾ ನೀನೇನೂ ಬೆದರಬೇಡ. ಈಗೊಂದು ಇಂಜೆಕ್ಶನ್ ಕೊಡತೇನಿ. (ಡಾಕ್ಟರ ಇಂಜೆಕ್ಶನ್ ತಯಾರಿಗೆ ತೊಡಗುವರು.)

**ಮರಿಯಪ್ಪ :** (ದೀನ ದನಿಯಲ್ಲಿ) ಯಪ್ಪಾ, ಅದಕ್ಕ ಏಸು ರೂಪಾಯ್ರೀ ?

ಡಾಕ್ಟರ : (ಸಿರಿಂಜ ನೋಡುತ್ತ) ಈಕೆ ನಿನ್ನ ಮಗಳಲ್ಲ; ನನ್ನ ತಂಗಿ ! ನನ್ನ ತಂಗಿಗೆ ನಾನು ಉಪಚಾರ ಮಾಡಲಿಕ್ಕೆ ದುಡ್ಡು ಯಾರಿಂದ ತಗೊಳ್ಳಬೇಕು ?

ಮರಿಯಪ್ಪ (ಒಮ್ಮೆಲೆ ಡಾಕ್ಟರರ ಪಾದಃ ಬಿದ್ದು ಗದದ ದನಿಯಲ್ಲಿ) ಯಪಾss ಆ ನನ್ನ ಮಾತಾಯಿ ದುರುಗವ್ವ ನಿಮ್ಮ ಮಕ್ಕಳು ಮರಿಗೆ ಬಾಳಾ ದಿವಸ ಬದುಕೂ ಹಾಂಗ ಹರಕೀ ಕೊಡಲ್ರಿss.

ಡಾಕ್ಟರ : ಆ ಮಹಾತಾಯಿಯ ಹರಕೆ ಈ ನನ್ನ ತಂಗಿಗೆ ಮುಟ್ಟಲಿ; ಮುಟ್ಟತದೆ. ತಿಳೀತಿಲ್ಲೋ ? ನೀ ಏನೂ ಅಂಜಬೇಡ.

ಲಕ್ಷ್ಮೀ ಅಯ್ಯೋss ಉರಿs ಉರಿss.

ಡಾಕ್ಟರ : ತಡೆಯಮ್ಮಾ ತಡೆ. ಮಾಧವರಾಯರೇ, ಒಂದು ಸೋಡಾ ಒಡೆದು ಸ್ವಲ್ಪ ಕುಡಿಸಿರಿ. (ಕುಡಿಸುವಾಗ) ಹಾಂ ಹಾಂ, ತುಸು...ತುಸು... ಗುಟುಕು ಗುಟುಕು......ಒಣಗಿದ ಗಂಟಲು......ಕೆಮ್ಮು ಬಂದೀತು. (ಗ್ಲಾಸಿನಲ್ಲಿ ಹಾಕಿ ಸೋಡಾ ಕುಡಿಸುವುದು ಮುಗಿಯುವುದು. ತನ್ನ ಕರ ವಸ್ತ್ರದಿಂದ ಮಾಧು ಲಕ್ಷ್ಮಿಯ ಹಣೆಯ ಮೇಲಿನ ಬೆವರನ್ನು ಒರೆಸುತ್ತಾನೆ.)

ಲಕ್ಷ್ಮೀ : (ಮೆಲ್ಲನೆ ಕಣ್ತೆರೆದು) ರಾಯರೇ, ಮುಟ್ಟತೀರಲ್ರೀs... ನಾವು ಹೊಲ್ಯಾರು, ಮಾದರು......!

ಮಾಧವ : ಹೌದು...ನಾನು ನಿನ್ನ ಅಣ್ಣ. ಅಂತಲೇ ಮುಟ್ಟತೇನಿ. ಹಾಂ; ಮಾತಾಡಬೇಡ. ಡಾಕ್ಟರರು ಇಂಜೆಕ್ಶನ್ ಕೊಡತಾರೆ. ಇನ್ನೊಂದು ಅರ್ಧ ಗಳಿಗೆಯೊಳಗೇ ಜ್ವರ ನಿಂತ ಹೋಗತದೆ.

(ಡಾಕ್ಟರ ಇಂಜೆಕ್ಶನ್ ಕೊಡುವರು. ಲಕ್ಷ್ಮಿ ಅಯ್ಯೋ ಎನ್ನುವಳು.) ಹಾಂ! ಮುಗೀತು, ಮುಗೀತು...ಡಾಕ್ಟರರೇ, ಊಟ ಉಪಚಾರ ಹೇಗೆ?

ಡಾಕ್ಟರ : ಮೊಸಂಬಿ ರಸ, ಹಾಲು, ಬೇಕಾದರೆ ಕಾಫಿ—ಇಷ್ಟರ ಮೇಲೆಯೇ ಇರಲಿ ಎರಡು ದಿವಸ. ಜ್ವರ ಆರಿತು ಅಂದರೆ ಸಾಬೂಅಕ್ಕಿ ಗಂಜಿ ಕೊಡೋಣಂತ.

**ಮರಿಯಪ್ಪ :** (ನಿಟ್ಟುಸಿರು ಬಿಟ್ಟು, ಕಣ್ಣೀರು ತಂದು) ಮೊಸಂಬಿ... ಹಾಲು......ಹಣ್ಣು......ಸಾಬೂಅಕ್ಕಿ......! ಈ ಬಡತನದ ಬಾಳಿನಾಗ ಮಕ್ಕಳ್ನ ಕೊಟ್ಟ ದೇವರಿಗೆ ಬುದ್ಧಿ ಇಲ್ಲ. ದ್ಯಾವ್ರು....ಮೊಸಂಬೆ...ಹಾಽಽಲು (ದು:ಖ ಒತ್ತರಿಸಿ ಬಂದು ನಿಲ್ಲುವನು.)

**ಮಾಧವ :** ಮರಿಯಪ್ಪಾ, ಕಣ್ಣೀರು ತೆಗೆಯಬೇಡ ಅಂತ ಹೇಳಲಿಲ್ಲವೆ? ಯಾವುದಕ್ಕೂ ನಾನಿದ್ದೇನಿ. ಅದರ ಕಾಳಜೀ ನಿನಗೆ ಯಾಕೆ? ಹೆದರಬೇಡ.

(ಮರಿಯಪ್ಪ ಕಣ್ಣೊರೆಸಿಕೊಳ್ಳುವನು.)

**ಡಾಕ್ಟರ :** ಹುಚ್ಚ ಇದ್ದೀ ಅತು. ಆಗಲೇ ಹೇಳಿದೆನಲ್ಲವೇ ಈಕೆ ನನ್ನ ತಂಗಿ ಅಂತ ? ಆಕೀನ್ನ ಜರೈಕೆಮಾಡೋ ಭಾರ ನನ್ನದು. ತಿಳೀತೋ ಇಲ್ಲೊ? (ಮರಿಯಪ್ಪ ಮತ್ತೆ ಕೈಮುಗಿಯುವನು.) ಮಾತ್ರ, ನೀನು ಆಕೀಗೆ ಆಗಾಗ ಧೈರ್ಯ ಕೊಡುತಾ ಇರಬೇಕು. ಮತ್ತೆ, ಯಾವದಕ್ಕೂ ಹಾಸಿಗೆ ಬಿಟ್ಟು ಕೆಳಗೆ ಇಳಿಸಬಾರದು.

**ಮರಿಯಪ್ಪ** ಹಾಂಗಂದರೆ. .ಮ. .ಮೂ.

**ಮಾಧವ :** ಅದನ್ನೆಲ್ಲ ನಾನು ನೋಡಿಕೊಳ್ಳತೇನೆ. ಡಾಕ್ಟರರು ಬೆಡ್ ಪ್ಯಾನ್ ಕಳಿಸತಾರೆ. ಹನುಮಂತಪ್ಪ, ನಾನು, ಈ ಸ್ವಯಂಸೇವಕರು ಅದೆಲ್ಲ ಹೊಲಸು ಹೊರಗೆ ಚೆಲ್ಲತೇವಿ. ಆಯ್ತಿಲ್ಲೋ ?

**ಡಾಕ್ಟರ :** ಆದರೆ, ಮರಿಯಪ್ಪಾ, ನೀ ಒಂದು ಕೆಲಸ ಮಾಡಬೇಕು. ಮನೆಯೊಳಗಿನ ಈ ಹೊಲಸು, ಸುತ್ತಲಿನ ಕೊಳಚೆ ಇವುಗಳಿಂದಲೇ ಲಕ್ಷ್ಮ್ಮಿಗೆ ಬೇನೆ ಬಂದಿರೋದು. ನೀನು ಆರೈಕೆ ವಿಚಾರ ಬಿಡು; ಈ ಮನೇ ಸುತ್ತಲಿನ ಸ್ಥಳ ಎಲ್ಲಾ ಎಲ್ಲಾ ಸ್ವಚ್ಛ ಮಾಡು. ನನ್ನ ಸಂಗಡ ಬರ್ರಿ; ಔಷಧ ಕಳಿಸತೇನಿ. ಮರಿಯಪ್ಪಾ, ಮರೀಬ್ಯಾಡ. ನಾ ತಿರುಗಿ ಬರೋವರೊಳಗೇ ಮನೆ ಎಲ್ಲ ಜಳಜಳ ಆಗಿರಬೇಕು, ಉಳಿದ ಯಾವುದನ್ನೂ ಮನಸಿಗೆ ಹಚ್ಚಿಕೊಳ್ಳಬೇಡ.

(ಮರಿಯ ಸಮ್ಮತಿ ಸೂಚಕವಾಗಿ ಕೈ ಮುಗಿಯುವನು.)

ಮಾಧವ : ( ೫ ರೂಪಾಯಿ ನೋಟ ಮುಂದೆ ಮಾಡುತ್ತ ) ಡಾಕ್ಟರ....?

ಡಾಕ್ಟರ : ಹುಚ್ಚು ಹಿಡಿಯಿತೇ ಮಾಧೂ ನಿನಗೆ ? ಆಗಲೇ ಹೇಳ ಲಿಲ್ಲವೇ, ಈಕೆ ನನ್ನ ತಂಗಿ ಅಂತ? ರೂಪಾಯಿ ನಿಮ್ಮಲ್ಲೇ ಇರಲಿ. ನಾನೇ ಎಲ್ಲಾ ಸಾಮಾನು ಕಳಿಸುವೆ. ಕಡಿಮೆ ಬಿದ್ದಾಗ ನೀವು ಮತ್ತೇನಾದರೂ ತರಿಸುವಿರೆಂತೆ. ಮರಿಯಪ್ಪಾs (ಅವನು ಕಣ್ಣೀರು ಸುರಿಸುತ್ತಿರುವ) ಅಳುವೆ ಯಾಕೋ ? ಮಗಳ ಪ್ರಾಣದ ಬಗೆಗೆ ಭಯವೇನು ನಿನಗೆ ?

ಮರಿಯಪ್ಪ : ಇನ್ನ್ಯಾತರ ಅಂಜಿಕೀರಿsss; ದೇವರs ಕಳಿಸಿಕೊಟ್ಟಾನ ನಿಮ್ಮನ್ನ ಇಲ್ಲಿಗೆ. ಆದರ ನೀವು ನಮ್ಮಂಥ ಬಡವರ ಮ್ಯಾಗ ದಯಾ ತೋರಿಸೋದು ನೋಡಿ...(ಮತ್ತೆ ಅವನ ಗಂಟಲು ಬಿಗಿಯುವದು)

ಡಾಕ್ಟರ : ( ಅವನ ಬೆನ್ನಮೇಲೆ ಕೈಯಾಡಿಸುತ್ತ ) ಹುಚ್ಚನಂತೆ ಮಾಡಬೇಡ, ಸಮಾಧಾನದಿಂದ ಇರು. ಬರತೇನಿ ಮಾಧವರಾಯಾ, ಉಪಚಾರ ಸರಿಯಾಗಿ ಸಾಗಲಿ. ಲಕ್ಷ್ಮೀದೇವಿ, ಈಗ ಸ್ವಲ್ಪ ಸಮಾಧಾನ ಆಯಿತಿಲ್ಲೋs? ( ಲಕ್ಷ್ಮಿ ಕಣ್ಣೀರುಕ್ಕಿಸುವಳು ) ನಿನಗೂ ನಿಮ್ಮಪ್ಪನ ಹುಚ್ಚು ಹಿಡೀತೇನು? ಬೇನೆಯವರು ನಗ-ನಗುತಾ ಇರಬೇಕು. ಎಲ್ಲಿ ಸ್ವಲ್ಪ ನಗು.... ( ಲಕ್ಷ್ಮಿ ನಗೆಯ ಅಭಿನಯ ಮಾಡುವಳು... ) ಹಾsಗೆ! ಬರತೇನಿ ಹಾsಂ. ಮರಿಯಪ್ಪಾ, ಬೇಗನೆ ಮನೆ ಸ್ವಚ್ಛ ಮಾಡು (ಡಾಕ್ಟರ ಹೋಗುವರು. ಮರಿಯಪ್ಪ ಅತ್ತಲೇ ನೋಡುತ್ತ ಕೈ ಮುಗಿಯುವನು. ಲಕ್ಷ್ಮಿಯೂ ಕೈಮುಗಿಯುವಳು. ಮಾಧವ ಕೃತಜ್ಞತಾದೃಷ್ಟಿಯಿಂದ ಡಾಕ್ಟರ ರತ್ತ ನೋಡುತ್ತಿರುವಾಗ, ತೆರೆ ನಿಧಾನವಾಗಿ ಇಳಿಯುವುದು. )

೨ ನೆಯ ಅಂಕ ಮುಗಿದುದು.

---

## ೩ನೆಯ ಅಂಕ

### ಪ್ರವೇಶ ೧

**ಸನ್ನಿವೇಶ :** (ಜಂಗಲ್ ರಸ್ತಾ ಪರದೆಯ ಮುಂದೆ) ಸೀತಕ್ಕ ಮಡಿ ನೀರಿಗೆ ಬರುತ್ತಾಳೆ. ಮತ್ತೊಂದು ವಿಂಗ್ಸ ಸಮೀಪಿಸಿದಾಗ, ಇದಿರಿಗೆ ಇಬ್ಬರು ಹರಿಜನರು ಬರಿಗೊಡ ತಕ್ಕೊಂಡು ಬರುತ್ತಾರೆ.

**ಹರಿಜನ :** ಶಣ್ರೀ ಯವ್ವಾss, ನೀರಿಗೆ ಬಂದೀರಿ ?

**ಸೀತಕ್ಕ :** ...ಯಾಕೋ ಬರೀಕೊಡ ತಕ್ಕೊಂಡು ಹೋಗು ತೀರಲ್ಲ ?

**ಹರಿಜನ :** ಮತ್ತೇನು ಮಾಡಬೇಕ್ರೀss ? ನೀರ ತುಂಬಾಕ ಬಿಡ ವಲ್ರು ?

**ಸೀತಕ್ಕ :** ಅದ್ಯಾಕಂತ ? ಗಡಗಡೆ ತೆರವು ಇಲ್ಲೇನು ?

**ಹರಿಜನ :** ಐತ್ರಿss ! ( ಉಗುಳುನುಂಗುತ್ತ ) ಆ-ದ-ರ- ಅಲ್ಲೇ ಶಂಕ್ರಪ್ನೋರು ನೋಮೇರು ಕಾಳಾಚಾರ್ರುss ಜಳಕಾ ಮಾಡಾಕ ಹತ್ತ್ಯಾರ...s; ಅದಕಂತ...ನಮ್ಮನ್ನ...ದೂರ...

**ಸೀತಕ್ಕ :** ಹೂssಂ ! ಹೆಣ್ಣು ಮಕ್ಕಳು ನೀರಿಗೆ ಬರುಹೋಗೋ ಹತ್ತರ ಜಳಕಾ ಬೇಕಾಯ್ತೇನು ಇವರಿಗೆ ?

**ಹರಿಜನ :** ನಮ್ಮನ್ನ ಕಂಡರ ಮೈಲಿಗೆ ಆಗತೈತಂತರೀ ಅವರಿಗೆ... ಅದಕ್ಕ 'ಎಲೇ ಹೊಲೆಯಾ ದೂರ ಹೋಗಿರಿ' ಅಂದರ್ರೀ...

**ಸೀತಕ್ಕ :** ಮೈಲಿಗೆ ಆದರೆ ಮತ್ತೆರಡು ಕೊಡ ಸುರಿವಿಕೊಂಡರೆ ತೀರಿತು; ಮಡಿ ಆಗತಿತ್ತು. ಬರ್ರಿ ಬರ್ರಿ, ನಾ ನಿಲ್ಲತೇನಿ; ನೀರು ಜಗ್ಗಿಕೊಂಡು ಹೋಗೀರಂತ.

(ತೆರೆಯ ಒಳಗಿನ ಧ್ವನಿ : ಹಾಂ ಹಾಂ ಸೀತಕ್ಕಾ ಕರಕೊಂಡು ಬರಬ್ಯಾಡ ಆ ಹೊಲೇರ್ನ. ಇದು ಬಾವಿ ಅದ, ಬಾಂವಿ!)

ಸೀತಕ್ಕ : ಬಾವಿ ಆದೆ ಅಂತಲೇ ಅವರೂ ಇಲ್ಲಿ ಬಂದಿರೋದು. ಹಾಂs. ಬರ್ರಿ ಮುಂದಕ್ಕೆ......ಹೆದರಬೇಡಿರಿ ಬರ್ರಿ. (ಹರಿ ಜನರನ್ನು ಕರೆಯುವಳು.)

(ಒಳಗಿನ ಧ್ವನಿ : ಬರ್‍ರಿ ಅಂದರೆ? ಅದ್ಹ್ಯಾಂಗ ಬರತಾರ ಹೊಲ್ಯಾರು ನಾವಿಲ್ಲಿ ಬಾವೀ ಹತ್ತರಾ ಇರತಿರಲಿಕ್ಕೇ?)

ಸೀತಕ್ಕ : ನಜ್ಜಾಗಿ ನಡಕೋತಾ ಬರತಾರೆ. ಅದಕ್ಕೇನೂ ಅವರು ನಿಮ್ಮ ಕಾಲು ಕೈಗಡ ಕೇಳೋದಿಲ್ಲ.

**ಶಂಕರ :** (ಸ್ನಾನದ ವೇಷದಲ್ಲಿಯೇ ರಂಗಕ್ಕೆ ಬರುವ) ನಿಮಗೆ ತಿಳೀ ಲಿಕ್ಕಿಲ್ಲ ಸೀತಕ್ಕ! ಮಡೀನೀರಿಗೆ ಬಂದೀರೇನೊ, ಸುಮ್ಮನೆ ಸೇದಿಕೊಂಡು ಹೋಗಿರಿ. ಸುಮ್ಮ-ಸುಮ್ಮನೆ ಈ ಹೊಲೆಮುಂಡೆಗಂಡರ ಉಸಾಬರಿಗೆ ಯಾಕೆ ಬೀಳತೀರಿ?

ಸೀತಕ್ಕ : ಆ ಉಸಾಬರಿಗೆ ಬಿದ್ದವರು ನಾನೋ ನೀವೋ? ನಿಮಗ ಅಡಿಗ್ಗೆ, ಊಟಕ್ಕೆ, ಜಳಕಕ್ಕೆ ಬೇಕಾದಷ್ಟು ನೀರು ಒಯ್ಯತೀರಿ. ಅವರು ಹೊಲೇರು ಅಂಡ ಮಾತ್ರಕ್ಕೇ ಕುಡೀಲಿಕ್ಕೆ ಕೂಡ ನೀರು ಇಲ್ಲದೆ ಸಾಯಲಿ ಅಂತೀರೇನು?

**ಕಾಳಾಚಾರಿ :** (ರಂಗದ ಮೇಲೆ ಬಂದು) ಸೀತಕ್ಕ, ಈ ಹೊಲೇರು ಅಂದರೆ ಪ್ಲೇಗದ ಪಿಡುಗು ಇದ್ಧಾಂಗ, ಪ್ಲೇಗದ ಪಿಡುಗು!

ಸೀತಕ್ಕ : (ಅದೇ ದನಿಯಲ್ಲಿ) ಮತ್ತೆ ಕಾಳಾಚಾರ್‍ರೀ, ಆ ಪಿಡುಗು ಹಬ್ಬೋದಕ್ಕೆ ಮೇಲಿನ ಜಾತಿಯ ಇಲಿಗಳೇ ಕಾರಣ ಆಗತವೆ.

**ವಿರೂಪಾಕ್ಷಯ್ಯ :** ( ಬಂದು ) ಸೀತಕ್ಕss, ಈ ಮಾತು ನಿಮ್ಮ ಮಾವಂದಿರ ಕಿವಿಗೆ ಬಿದ್ದರೆs... ನಿಮ್ಮ ಗತೀss....ಗಂಗವ್ವನ್ನ ಕೂಡತದೆ.

ಸೀತಕ್ಕ : ನನ್ನ ಮಾವಂದಿರು ಪಕ್ಕಾ ಸನಾತನಿಗಳು, ದೇವಭಕ್ತರು ಅನ್ನೋದು ನನಗೂ ಗೊತ್ತದೆ. ಆದರೆ, ಅದೇ ದೇವರೇ ಹುಟ್ಟಿಸಿಲ್ಲೇನು

ಈ ಹರಿಜನರನ್ನು? ನಿಮ್ಮಂತೆಯೇ ಅವರಿಗೂ ಕೈ, ಕಾಲು, ಕಣ್ಣು, ಮೂಗು, ಕಿವಿ ಎಲ್ಲಾ ಅಷ್ಟಷ್ಟೇ ಇವೆ. ಮೇಲಿನ ಜಾತಿಯವರಷ್ಟೇ ದೇವರಿಗೆ ಪ್ರೀತಿಯ ಮಕ್ಕಳಾಗಿದ್ದರೆ, ಈ ಹರಿಜನರನ್ನೂ ನಿಮ್ಮ ಅಚ್ಚುಪಡಿ ಯೊಳಗೇ ಯಾಕೆ ಹಾಕುತ್ತಿದ್ದ? ಎಲ್ಲರೂ ಬಂಧು-ಬಾಂಧವರಂತೆ......!

ಶಂಕರ: ಬಂಧು-ಭಾಂಧವರು ಅಂತೆ ಈ ಹೊಲೆಯರು. ಸೀತಕ್ಕನ ಮುಂದಿನ ಪರಿಣಾಮ ತಿಳಿಯದೇ ಈ ತೊಂದರೆಯೊಳಗೆ ತಲೆ ಹಾಕ...

ಸೀತಕ್ಕ: (ನಗುತ್ತ) ತಲೆ ಹಾಕತೀರಿ...ಹಾ ಹಾ ಹಾ...ತಲೆ ಹಾಕ ತೀರಿ. ದೀಕ್ಷಿತರೇ, ಹಿಂದಿನವರು ಹೇಳಿದ್ದಕ್ಕೆಲ್ಲ ತಲೆ ಹಾಕೋ ಕೆಲಸ ಯಾರು ಮಾಡತಾರೆ ಅನ್ನೋದನ್ನ ನೀವೇ ತಿಳಿದುಕೊಳ್ಳೋದು ಒಳ್ಳೆಯದು. (ಗಾಂಭೀರ್ಯದಿಂದ) ಮುಂದಿನ ಪರಿಣಾಮವಂತೆ! ದೀಕ್ಷಿತರೇ, ಸಾರ್ವ ಜನಿಕ ಕೆರೆ-ಬಾವಿಗಳಲ್ಲಿ ನೀರು ತುಂಬೋದಕ್ಕೆ ಹರಿಜನರಿಗೆ ಯಾರೂ ಅಡ್ಡೀ ಮಾಡಬಾರದು, ಅಂತ ಸರಕಾರ ಕಾಯ್ದೆ ಮಾಡೇದ; ಗೊತ್ತಿಲ್ಲೇನು ನಿಮಗ? ಹೀಗಿದ್ದರೂ ನೀವು ಅಡ್ಡೀಮಾಡತಾ ಇದ್ದೀರಿ. ಇವರು ಹೀಗೇ ಹೋಗಿ ಸರಕಾರಕ್ಕೆ ದೂರು ಕೊಟ್ಟರೆ, ಏನಾದೀತು ಮುಂದಿನ ಪರಿಣಾಮ ಅನ್ನೋದನ್ನ ನೀವು ವಿಚಾರ ಮಾಡಬೇಕು. ಯಾಕಂದರೆ, ನೀವು ಈ ಹಳ್ಳಿಯ ಪಂಚಾಯತಿಯ ಪಂಚರು, ಸರಕಾರಕ್ಕೆ ಸಂಬಂಧಿಸಿದವರು! ಮುಂದಿನ ಪರಿಣಾಮವಂತೆ, ಪರಿಣಾಮ!

ಕಾಳಾಚಾರಿ: ನಿಮಗೆ ತಿಳೀಲಿಕ್ಕಿಲ್ಲ ಸೀತಕ್ಕನವರ, ನೀವಿನ್ನೂ ಅತ್ತೆಯ ಮನೆ ಸೊಸೆ ಆಗಿದ್ದೀರಿ. ನಿಮ್ಮ ಅತ್ತೆ-ಮಾವಂದಿರು ಹಳೆಯ ಕಾಲದ ಸಂಪ್ರದಾಯದವರು. ನೀವೂ ಅವರಂತೇ ನಡೆಯಲಿಲ್ಲ ಅಂದರೆ...? ನಾ ಈಗೇ ಹೇಳಿರತೇನಿ— **ಈ ತಲೆತಿರುಕುತನದ ವಿಚಾರ** ಬಿಟ್ಟುಬಿಡಿರಿ.

ಸೀತಕ್ಕ: (ನಗುತ್ತ) ತಲೆ ತಿರುಕತನ! (ಮತ್ತೆ ನಗುತ್ತ) ನನ್ನದು **ತಲೆ ತಿರುಕತನ** ನಿಮ್ಮದು **ತಿರುಕತನದ ತಲೆ!** ತಾತ ತೋಡಿದ ಬಾವಿ ಅಂತ, ಸವುಳು ನೀರನ್ನೇ ಕುಡಿಯಬೇಕೆನ್ನುವ, ಹಳಸಿದ ವಿಚಾರಗಳ ತಿರುಕ ತನದ ತಲೆ ನಿಮ್ಮದು. ಕಾಲಕ್ಕೆ ತಕ್ಕಂತೆ ವಿಚಾರ-ಆಚಾರಗಳಲ್ಲಿ ಮಾರ್ಪಾಟ ಬೇಕು ಅನ್ನುವ ನನ್ನ ತಲೆತಿರುಕತನ ತಿರುಕತನದ ತಲೆಗಿಂತ ಏನೂ ಕೆಟ್ಟದ್ದಲ್ಲ.

ವಿರೂಪಾಕ್ಷಯ್ಯ : ಅಂದರೆ? ಆ ಹಳೇ ಆಚಾರ ವಿಚಾರಗಳನ್ನೆಲ್ಲ ಬಿಡಬೇಕಂತೀರಾ?

ಸೀತಕ್ಕ : ಅಯ್ಯನವರೇ, ಚಳಿಗಾಲದ ಮೈ ಕೊರೆಯುವ ಚಳಿಯೊಳಗೆ ನೀವು ದೊಡ್ಡ ಕಂಬಳಿಯನ್ನು ಹೊತ್ಕೊಂಡಿರಬಹುದು. ಮುಂದೆ ಮೈಸುಡೋ ಬೇಸಗೆ ಬಂದ ಮೇಲೆಯೂ ಅದೇ ಕಂಬಳಿಯ ಮುಸುಕು ಹಾಕಿಕೊಳ್ಳಬೇಕಂತೀರಾ?

ಶಂಕರ : (ಹೆಮ್ಮೆಯಿಂದ) ಏನ್ ಹೇಳತೀರೀss ? ಹಿಂದಿನ ಕಾಲಬಲದ ಮೇಲೇ ಬದುಕೇದ ನಮ್ಮ ಸನಾತನ ಧರ್ಮss !

ಸೀತಕ್ಕ : (ಅಟ್ಟಹಾಸ ಮಾಡುತ್ತ) ಹಿಂದಿನ ಕಾಲ ಬಲ (ಮತ್ತೆ ನಗು) ಹಿಂಗಾಲ ಬಲದ ಮೇಲೆ ಬದುಕೋ ಪ್ರಾಣಿ ಯಾವದು ಅಂತ ನಿಮಗೇ ಗೊತ್ತು ! ಹಿಂದಿನ ಕಾಲ ಬಲ. (ಮತ್ತೆ ನಗು).

ಶಂಕರ : ( ಅಪಮಾನಿತನಾಗಿ ) ಅಂದರೆ ? ನಮ್ಮನ್ನು ಕತ್ತೆ-ಅಂತೀರೇನು ?

ಸೀತಕ್ಕ : ನಿಮ್ಮ ಮಾತುಗಳೇ ಹಾಗೆ ಹೇಳುತವೆ; ನನ್ನ ಮಾತು ಅಲ್ಲ ಅವು.

ಕಾಳಾಚಾರಿ : ದೀಕ್ಷಿತರೇ, ಸುಮ್ಮನೆ ಏಕೆ ತಲೆ ಒಡಕೊಳ್ಳುತೀರಿ? ಹೇಳಿಸೋವರ ಕಡೆಯಿಂದ ಹೇಳಿಸಿದರೆ ತಾವೇ ಹಾದಿಗೆ ಬರತಾರೆ. ಹೀಗೇ ಸಡಿಲು ಬಿಟ್ಟರೆ, ನಾಳಿಗೆ ನಮ್ಮ ಗುಡಿ-ಗುಂಡಾರ ಎಲ್ಲಾ...

ಸೀತಕ್ಕ: (ಮತ್ತೆ ನಗು)ನಮ್ಮ ದೇವರ ಗುಡಿss! ನಮ್ಮ ದೇವರು... (ಮತ್ತೆ ನಗು) ಜಗತ್ತಿನಲ್ಲಿ ಎಲ್ಲರಿಗೂ ದೇವರು ಒಬ್ಬನೇ ಅನ್ನೋದು ನಿಮ್ಮ ಶಾಸ್ತ್ರ ಪುರಾಣಗಳೊಳಗೆ ಬಂದೇ ಇಲ್ಲವೇನೋ! ನಮ್ಮ ಗುಡಿ...(ನಗುತ್ತ) ಅಂದರೆ, ದೇವರನ್ನು ಕೂಡಾ ಸೆರೆಯೊಳಗೆ ಹಾಕಿದ್ದೇವೆ; ಎಂದ ಮೇಲೆ ಮನುಷ್ಯರ ಪಾಡೇನು ? ಅಂತ ಹೆಮ್ಮೆಯ ಮಾತು ಹಾಡಲ್ಲೋ ? ನಮ್ಮ ದೇವರು... ನಮ್ಮ ಗುಡಿ. (ನಗು).

**ವಿರೂಪಾಕ್ಷಯ್ಯ** : ದಿಕ್ಷಿತರೇ, ಸುಮ್ಮನೆ ಹೊತ್ತು ಕಳೆಯೋದು ಬ್ಯಾಡ. ಹೇಗೂ ಸ್ನಾನ ಆಗೇದ. ಹೀಗೆ ಹೋಗಿ ಇವರ ಮಾವಂದಿರಿಗೆ ಹೇಳಿ ಬಿಡೋಣ. ಏನಿದ್ದದ್ದನ್ನು ಅವರೇ ಇತ್ಯರ್ಥ ಮಾಡಲಿ.

**ಕಾಳಾಚಾರಿ** : ಅಕ್ಕನಾಲಿಗ ಮುರುವು ಚುಚ್ಚಿದರೇ ನೋವಾಗೋದಿಲ್ಲ. ನಡೀರಿ ಹೋಗೋಣ.

**ಸೀತಕ್ಕ** : (ಅಣಕದ ದನಿಯಲ್ಲಿ) ಹೋಗೋದು ಹೋಗತೀರಿ; ಮತ್ತೆ ಈ ಹರಿಜನರು ಬಾವಿಯೊಳಗ ನೀರು ತುಂಬೋದನ್ನ ನೋಡೇ ಹೋಗಿಬಿಡಿರಿ. (ಹರಿಜನರಿಗೆ) ನಡೀರಿ, ನೀರು ಜಗ್ಗಿಕೊಳ್ಳಿರಿ.

(ಹರಿಜನರು ಒಳಗೆ ಹೋಗುವರು. ಸೀತಕ್ಕ ತ್ರಿಮೂರ್ತಿಗಳನ್ನು ನೋಡುತ್ತಿರುವಳು.) ಹೂ, ನಿಂತಿರೇಕೆ? ಜಗ್ಗಿಕೊಳ್ಳಿರಿ. (ಗಡಗಡೆ ಸಪ್ಪಳು).

**ಶಂಕರ** : (ಒಳಗೆ ನೋಡಿ ಹಲ್ಲು ಕಡಿಯುತ್ತ) ಕಲಿಯುಗ ಬಂದsದ ಕಲಿಯುಗ! ಕಲೌತು ಭ್ರಷ್ಟಾಚಾರಃ, ಅಂತ ಹೇಳೇ ಬಿಟ್ಟsದಲ್ಲ ಶಾಸ್ತ್ರದೊಳಗ. ಹsಂ! ಭ್ರಷ್ಟಾಚಾರ, ಭ್ರಷ್ಟಾಚಾರ. (ಸೀತಕ್ಕನನ್ನೂ ಹರಿಜನರನ್ನು ದುರುಗುಟ್ಟಿ ನೋಡುತ್ತ ಮೂವರೂ ಹೋಗುವರು. ದೀಕ್ಷಿತ ಮಡಿವಂತಿಕೆಯಿಂದ ಟಣ್ಣನೆ ಹಾರುವನು.)

**ಸೀತಕ್ಕ** : ಹಃ ಹಃ ಹಃ! ಪಾಪ, ಪಾಪ! (ಅಣಕದ ದನಿಯಲ್ಲಿ) ದಾರಿಯೊಳಗೆ ಮುಳ್ಳು ತುಳಿದರೋ ಏನೋ ದೀಕ್ಷಿತರು! (ದೀಕ್ಷಿತ ಮತ್ತಿಷ್ಟು ಅವಡುಗಚ್ಚಿ ಆಕೆಯನ್ನು ನೋಡುತ್ತ ಹೋಗುವ. ಅಷ್ಟರಲ್ಲಿ ಹರಿಜನರು ತುಂಬಿದ ಕೊಡಗಳನ್ನು ಹೊತ್ತುಕೊಂಡು ಬರುವರು.)

**ಹರಿಜನರು** : ಯವ್ವಾsss ನಿಮ್ಮಿಂದ ನೀರು ಕಂಡಿವ್ರೀsss! ಬರ್ತೇವಿ ತಾಯೀsss!

(ಹರಿಜನರು ಹೋಗುವರು. ಸೀತಕ್ಕ ಬಾವಿಯ ಕಡೆಗೆ ತೆರಳುವಳು.)

## ಪ್ರವೇಶ ೨

(ಸನ್ನಿವೇಶ: ಶ್ರೀನಿವಾಸರಾಯರ ದಿವಾನಖಾನೆ. ರಾಯರು, ಆರಾಮ ಖುರ್ಚಿಯಲ್ಲಿ ಕುಳಿತು ವರ್ತಮಾನಪತ್ರವನ್ನು ಓದುತ್ತಿದ್ದಾರೆ. ಎಡಗಡೆಗೆ ಟೀ ಪಾಯ್, ಎದುರಿಗೆ ಎರಡೆರಡರಂತೆ ನಾಲ್ಕು ಖುರ್ಚಿ.)

**ಶ್ರೀನಿವಾಸರಾಯ:** (ಓದುತ್ತಲೇ) ಸೀತಾ, ಏ ಸೀತಾऽऽ...

**ರಮಾದೇವಿ:** (ಬಂದು) ಯಾಕರೀऽऽ.

**ಶ್ರೀನಿವಾಸ:** (ನಗುತ್ತ) ಸೀತಾನ್ನ ಕರಿದರೆ ಕೌಸಲ್ಯಾ ಯಾಕೆ ಬರ ಬೇಕಾಯಿತು? ಪಾಪ, ಪಾಪ! ಸೊಸೆಯನ್ನು ದುಡಿಸಲಾರದಷ್ಟು ಪ್ರೇಮ ವೇನೋ! ಒಳ್ಳೇದು; ಚಹಾ ಬರಲಿ.

( ರಮಾದೇವಿ ಏನನ್ನೋ ಹೊರಗೆ ನೋಡಿ, ಒಳಗೆ ಹೋಗುವಳು. ) (ರಾಯರು ಓದುತ್ತ) ಕರ್ನಾಟಕ ರಾಜ್ಯ ಆಗೋದಕ್ಕೆ ಎಷ್ಟೊಂದು ತೊಡಕು! ರಾಷ್ಟ್ರ ಪುನರ್ಘಟನಾ ಆಯೋಗದವರು ನಿರ್ವಿವಾದ ಕನ್ನಡಭಾಗಗಳನು ಕತ್ತರಿಸಿ ಹಾಕಿದರು. ಹೊಸರಾಜ್ಯ, ಕರ್ನಾಟಕವೋ ಬೃಹತ್ತರ ಮೈಸೂರೋ ಎಂದು ಹೆಸರಿನ ತೊಡಕು! ಈಗ ಮುಂಬೈರಾಜ್ಯದಲ್ಲಿಯೇ ಕರ್ನಾಟಕ ಇರ ಬಾರದೇಕೆ, ಎಂದು ವಲಯ ರಾಜ್ಯಗಳ ತೊಡಕು!... (ರಮಾದೇವಿ ಚಹಾ ತಂದಿಟ್ಟು ಮತ್ತೆ ಹೊರಗೆ ಏನನ್ನೋ ನೋಡುತ್ತ ಒಳಗೆ ಹೋಗುವಳು. ರಾಯರು ಚಹಾ ಕುಡಿಯುತ್ತ) ಈ ಬಗ್ಗೆ ನಮ್ಮ ಪಂಚಾಯತಿಯಿಂದ ನಮ್ಮ ಅಭಿಪ್ರಾಯವನ್ನೂ ತಿಳಿಸೋಣ, ಅಂತ ಪಂಚರಿಗೆ ಬರೋದಕೆ ಹೇಳಿದ್ದೆ. ಯಾಕೋ ಅವರು ಇನ್ನೂ ಬರಲೇ ಇಲ್ಲ. (ಕಪ್ ಸಾಸರು ಕೆಳಗಿಟ್ಟು) ದುರುಗಾ, ಏ ದುರುಗಾऽऽ.

**ದುರುಗ:** (ಅವಸರದಿಂದ ಬಂದು) ಯಾಕ್ರೀ ದಣೇರ...?

**ಶ್ರೀನಿವಾಸ:** ಶಂಕರ ದೀಕ್ಷಿತ, ವಿರೂಪಾಕ್ಷಯ್ಯ, ಕಾಳಾಚಾರಿ ಪಂಚರು ಬಂದಿದ್ದರೇನೋ? ಬೆಳಿಗ್ಗೆ ಬರಲಿಕ್ಕೆ ಹೇಳಿದ್ದೆ; ಇನ್ನೂ ಬರಲಿಲ್ಲ...

**ದುರುಗ:** ಮನಿಂದ ಹೊಂಟಮ್ಯಾಗ ನೆಟ್ಟಗ ಬರಾವರಲ್ರೀ ಅವರು. ಯಾವ್ದರ ಒಂದು ಗಡಬಿಡ್ಯಾಗ ಸಿಕ್ಕಿದ್ದಾರು.

**ಶ್ರೀನಿವಾಸ:** ( ಅಚ್ಚರಿಯ ನಗೆಯಿಂದ ) ಅಲ್ಲಲೇ ಮಗನೇ, ಮುಂಜಾನೆ ಕಸಾ ಹೊಡಿಯೋ ಮುಂದೆ ಮಣ್ಣುಮುಕ್ಕ ಹಾವು ಇದ್ದಾಂಗ ಇದ್ದಿs; ಮನೇಗೆ ಹೋಗಿ ಬರೋದರೊಳಗೇ ಬೆಳ್ಳಗ ಬೆಳ್ಳಕ್ಕಿ ಆಗೀಯಲ್ಲ!

**ದುರುಗ:** ( ಹೆಮ್ಮೆಯಿಂದ ಮೈ-ಕೈಗಳನ್ನು ನೋಡಿಕೊಳ್ಳುತ್ತ ) ನಮ್ಮೋಣ್ಯಾಗಿನ ಎಲ್ಲಾ ಹೆಣ್ಣೂ ಗಂಡೂ ಹೀಂಗೇ ಇರತಾವ್ರೀ.

**ಶ್ರೀನಿವಾಸ:** ಹೊssಂs ! ಯಾರೋ ಒಳ್ಳೇ ತಯಾರ ಮಾಡ್ಯಾರೋs?

**ದುರುಗ:** ಮಾದ್ ( ಇದಿರಿಗೆ ಒಳಗಿನಿಂ ಬರುವ ರಮಾದೇವಿ ದುರುಗನನ್ನು ಕಣ್ಣುಸನ್ನೆಯಿಂದ ಬೆದರಿಸುವಳು. ಮಾಧುವಿನ ಹೆಸರು ಬಾಯಲ್ಲಿ ಬಂದುದಕ್ಕಾಗಿ ಕುತ್ತಿಗೆಯಲ್ಲಿ ತುತ್ತು ಸಿಕ್ಕವನಂತೆ ತತ್ತರಿಸುತ್ತ ) ಮಾದರ ಓಣ್ಯಾಗ ಅಂದ್ರಿss? (ರಮಾದೇವಿ ನಗುತ್ತ ಕಪ್-ಸಾಸರ ಒಯ್ಯುವಳು. )

**ಶ್ರೀನಿವಾಸ:** (ಹುಸಿ ತಿರಸ್ಕಾರದಲ್ಲಿ) ಮತ್ತೇನು, ಹಾರೋರ ಓಣಿಯೊಳಗ ಇರತೀರೇನು ಮಗನೇ? ಮಾಡರು ಅಂದುಕೊಳ್ಳಿಕ್ಕೆ ನಾಚಿಕೆ ಬಂತೇನೋ ಅಲ್ಲ? ನಾಲಿಗೆ ಕಚ್ಚಿ ಮಾತಾಡತೀ?...ಹಿಂಗ ಬೆಳ್ಳಕ್ಕಿ ಹಾಂಗ ಕಂಡರೂ ಬುದ್ಧಿಯೊಳಗ ಏನೂ ಬದಲಾವಣೆ ಆಧಾಂಗ ಕಾಣಲಿಲ್ಲ...

**ದುರುಗ:** ಅದೂ ನಡದೇತ್ರೀ...

**ಶ್ರೀನಿವಾಸ:** ಏನ್ ನಡೀತದ ನಿನ್ನ ತಲೆ! ಯಾವಾಗ ಕರೆದರೂ ಸೆರೇ ಕುಡಿದವರ್ಹಾಂಗ ಮಬ್ಬುಗಣ್ಣಿನೊಳಗೇ ಬರುತೀ.

**ದುರುಗ:** ಎಲ್ಲಿಂದs ತರೋಣ್ರಿ ಸೆರೇವ್ನs; ಸರಕಾರ ಗಡಂಗಾ ಮುಚ್ಚಿಬಿಟ್ಟೈತಿ...

**ಶ್ರೀನಿವಾಸ:** ಆದರೂ ಹುಡುಕಾಡಿ ಭಟ್ಟಿಸರಾಯಿ ತರೋದನ್ನೇನೂ ಬಿಟ್ಟಿಲ್ಲ...!

**ದುರುಗ:** ಬರಾಬ್ಬರಿ ಹೇಳಿದ್ರಿ ದಣೇರss! ತರsದು ಬಿಟ್ಟಿಲ್ರೀss; ಆದರ ಕುಡಿಯಾವ್ರು ನಾವಲ್ರಿ...! ಹೆಸರಿಗೆ ನಮ್ಮದು ಕುಡೀ-ತಿನ್ನೋ ಜಾತಿs;

ಆದರ ಅದು ಮುಟ್ಟೋದುಽ... ಏನ ಹೇಳಲ್ರೀ ದ್ಯಾಪ್ರೂಽಽ— ಊರು ಹೊಲಿಗೇರಿ ಒಂದಾಗೇತ್ರಿ ತೀರಿತು. ಕವಳ ಮೈಮ್ಯಾಗ ಬಿತ್ತು ಅಂದರ ಊರೆಲ್ಲ ಹೊಲಗೇರ್ಯಾಗs ಇರತೇತೆಲ್ರೀ...! ಅವರಿಗೆ ಸೆರೇವು—ತತ್ತಿ—ಕೋಳಿ......

ಶ್ರೀನಿವಾಸ : (ನಡುವೆಯೇ) ಅವಿವೇಕನ್ನ ತಂದು. ಊರು ಹೊಲಗೇರಿ ಒಂದು ಮಾಡ್ಲಿಕ್ಕೆ ಹೊರಟಾನ ಮಗs! (ಏಳುತ್ತ) ನಾ ಸ್ನಾನಾಮಾಡಿ ಪೂಜಾ ನೈವೇದ್ಯ ತೀರಿಸಿಕೊಂಡು ಬರತೇನಿ. ದೀಕ್ಷಿತರು ಅವರು ಬಂದರೆ ಕೂತುಕೊಳ್ಳಲಿಕ್ಕೆ ಹೇಳು. (ರಾಯರು ಒಳಗೆ ಹೋಗುವರು.)

ರಮಾದೇವಿ : (ಅಂತರಂಗದ ಭಯವನ್ನು ಸೂಚಿಸುವಂತೆ ಬಂದು, ಹೊರಗೆ ನೋಡುತ್ತ) ಹುಚ್ಚು ಹುಡುಗಿಽಽ. ಮಡೀ ನೀರು ತರೋದಕ್ಕೆ ಅಂತ ಹೋದದ್ದು ಅತ್ತಲೇ ಸತಾಗತಿ! ಇವರ ಸ್ನಾನ ಆದ ಕೂಡಲೆ ಪಾರಾಯಣಕ್ಕೆ, ಪೂಜಾಕ್ಕೆ, ನೈವೇದ್ಯದ ಅಡಿಗೆಗೆ ಮಡಿನೀರು ಬೇಕು. ಮಾವ ದೇವರು-ಧರ್ಮ ಅಂದರೆ ಪ್ರಾಣಾ ಕಳಕೊಳ್ಳತಾರೆಽ; ಈ ಹುಡುಗರಿಗೆ ಕಾಲ ಕಸಾ ಆಗೇದ ಅದೆಲ್ಲ. ಗಂಡನ ಕೂಡ ಈಕೀನೂ ಹೊಲಗೇರಿಗೆ ಹೋಗಿದ್ದಾಳೋ ಏನೋ! ದುರುಗಾ, ಲಗು ಹೋಗಿ ಸೀತಾಗ ಹೇಳು ಮಡಿನೀರು ತರಲಿಕ್ಕೆ; ಮಾವ ಸ್ನಾನಕ್ಕ ಎದ್ದರು ಅಂತಲೂ ತಿಳಿಸು.

(ದುರುಗ ಒಳಗೆ ಮರೆಯಾಗುತ್ತಿರುವಾಗ ಒಂದು ದನಿ—"ಮುಟ್ಟೀಗಿಟ್ಟೀ ಮುಂಡೇಮಗನೇ. ಸರಿದು ಹೋಗು. ಸ್ನಾನಾ ಮಾಡೇವಿ." ದುರುಗನ ಉತ್ತರ : "ಹೋಗ್ರೀ ಸುಮಾಕ ಮುನ್ನೋಡಿಽಽ. ಒಳ್ಳೇ ಅದಾರಲೇ—ಮುಟ್ಟಲ ಮುರಕೀ ಗಿಡಾ ಆಗಿ ಹುಟ್ಟಿದ್ರೋ ಏನೋ ಹಿಂದಲ ಜಲಮದಾಗ" —ಈ ಮಾತನ್ನು ಕೇಳುತ್ತಲೇ ಆ ಕಡೆಗೆ ಕೆಟ್ಟಗಣ್ಣಿನಿಂದ ನೋಡುತ್ತ ತ್ರಿಮೂರ್ತಿಗಳು ರಂಗದ ಮೇಲೆ ಬರುವರು.)

ಶಂಕರ : (ಮೆತ್ತನೆಯ ದನಿಯಲ್ಲಿ—ಆದರೆ ಅಕ್ಕಸದಿಂದ) ನೋಡಿದ್ಯೋ ಇಲ್ಲೋ ಕಾಳಾಚಾರೀ...ಈ ಹೊಲೆ ಮಾದಿಗರಿಗೆ ಎಷ್ಟು ಸೊಕ್ಕು ಬಂದsದ! ಇದೆಲ್ಲಽ ಆ ಮಾಧೂರಾಯ-ಸೀತಾ ಕಲಿಸಿದ ಮಾತು; ಕೊಟ್ಟ ಸಲಿಗೆ...

(ಒಳಗಿಂದ ರಾಯರ ದನಿ— ಶನಿ ಗಂಟು ಬಿದ್ಹಾಂಗ ಆಗೇದ ನಮ್ಮ ಪಾಲಿಗೆ...)

**ವಿರೂಪಾಕ್ಷಯ್ಯ:** (ಹೌಹಾರಿದ ದನಿಯಲ್ಲಿ) ದೀಕ್ಷಿತರೇ, ಯಾರಿಗೆ ಈ ಮಾತು ?

**ಶ್ರೀನಿವಾಸ:** ( ಮಡಿಯುಡಿಯಲ್ಲಿ ಬರುತ್ತ ) ಚಾಂಡಾಲರಂಡೆ, ನಮ್ಮ ದೇವರು ಧರ್ಮ ಎಲ್ಲಾ ಎಲ್ಲಾ ಹಾಳುಮಾಡಿ ಹಳ್ಳಿಕ್ಕ ಕೂಡಿನತಾಳೆ. ಬರಲಿ ಮನೆಗೆ...

**ದೀಕ್ಷಿತ:** ಬರ್‍ರಿ ಬರ್‍ರಿ ನಮಸ್ಕಾರ. ಒಳ್ಳೇ ಸಿಟ್ಟಿನಲ್ಲಿ...

**ಶ್ರೀನಿವಾಸ:** ಓಹೋ ಪಂಚರೇನು ? ಬನ್ನಿ, ಕೂತುಕೊಳ್ಳಿರಿ. ಸಿಟ್ಟಿನಲ್ಲಿ...ಅಂದರ ? ಮಧ್ಯಾಹ್ನ ಆದರೂ ಮಡಿ ನೀರಿಗೆ ಗತಿಇಲ್ಲಧಾಂಗಾಗೇದ. ಯಾಕೆ ? ನಿಂತೇ ಬಿಟ್ಟಿರಲ್ಲ! ಕೂತ್...ಓಹೋ ಮಡೀಲಿದ್ದೀರೇನೋ...

**ಶಂಕರ:** (ಮಾತಿನ ಹಚ್ಚಡನೇಯಲು ಎಳೆಸಿಕ್ಕಿತೆಂಬ ಹುರುಪಿದ್ದರೂ, ಸೋಗಿನ ನಿರಾಶೆಯ ದನಿಯಲ್ಲಿ) ಮಡಿ, ಮ....ಡಿ ! ನಮ್ಮ ಮಡಿ ಎಲ್ಲಾ ಮೆಣಸಿನ ಮಡಿ ಕೊತ್ತುಂಬರಿ ಮಡಿ ಆಗೋ ಹೊತ್ತು ಬಂದsದ.

**ಶ್ರೀನಿವಾಸ:** ಕರ್ನಾಟಕ ರಾಜ್ಯರಚನಾ ವಿಚಾರಕ್ಕೆ ಬಂದೀರೇನೋ ಅಂದು ಕೊಂಡಿದ್ದೆ. ಪ್ರಕರಣ ಏನೋ ಭಾರಿ ಕಾಣತದೆ. ಕೂತುಕೊಳ್ಳಿರಿ; ಮತ್ತೆ ಸಾನಾ ಮಾಡೋಣಂತೆ (ಎಲ್ಲರೂ ಕುಳಿತುಕೊಳ್ಳುವರು.)

**ವಿರೂಪಾಕ್ಷಯ್ಯ:** ಸ್ನಾನಾ ಮಾಡೋದು, ಮಡಿ ಆಗೋದು ಈ ಊರೊಳಗೆ ಸಾಧ್ಯವೇ ಐಲ್ಲ. ನಾವು ಜಾತೀ ಉಳಿಸಿಕೊಂಡು ಬಾಳಬೇಕೂ ಅಂದರೆ ಈ ಊರನ್ನೇ ಬಿಡಬೇಕಾಗತದೆ, ಬಿಡಬೇಕಾಗೇದ.

**ಶ್ರೀನಿವಾಸ:** ಜಾತೀ ಉಳಿಸಿಕೊಂಡು ? ನಮ್ಮ ಜಾತೀ ಮೇಲೆ....

**ಕಾಳಾಚಾರಿ:** ಹೌದ್ರೀ,ನಮ್ಮ ಜಾತೀ ಮೇಲೇ! ಸರಕಾರ ಹೊಲೇರ ಬೆನ್ನು ಕಟ್ಟ್ಯೋದಷ್ಟೇ ತಡ; ಈ ಊರೊಳಗಿನ ತಲೆತಿರುಕ ತರುಣ ಹುಡುಗ ಹುಡುಗೇರು ಕಡಿವಾಣವಿಲ್ಲದ ಕುದುರೆಯಂತೆ ಕುಣಿದಾಡುತವೆ. ನಮ್ಮ ದೇವರು ಧರ್ಮಗಳು ಅವರ ಕಣ್ಣಲ್ಲಿ ಹೊಲೆಯರಿಗಿಂತ ಕೀಳಾಗಿ ಹೋಗಿವೆ.

**ಶ್ರೀನಿವಾಸ**: ಏನು ಹೇಡಿ ಮಾತು ಹೇಳತೀರಿ ಆಚಾರೀ? ನೀವೆಲ್ಲ ಊರೊಳಗಿನ ಸದ್ಗೃ ಪಂಚಾಯತಿಯ ಪಂಚರು ಆ ಪುಂಡರನ್ನು ಿಲ್ಲಿಂದಲ್ಲೇ ಅಡಗಿಸಲಿಕ್ಕೆ ಾಗಲಿಲ್ಲೇನು?

**ಶಂಕರ**: ಅದೇನೋ ಆಗಬಹುದಿತ್ತು; ಆದರೆ, ನಿಮ್ಮ ಸಂಗಡ ನಿಷ್ಠುರ ಕಟ್ಟಿಕೊಳ್ಳಬೇಕಾಗತದಲ್ಲs ಅಂತ...

**ಶ್ರೀನಿವಾಸ**: ನಾನೇನೂ ಸಮಾಜಕ್ಕಿಂತ ದೊಡ್ಡವನಲ್ಲ. ನೀವು ಕೇಳೋದೂ ತಿಳೀತದೆ. ಮಾಧೂನ ವಿಷಯ— ಹೊಲೆಗೇರಿ ಹೊಗತಾನೆ ಅಂತ ಕೇಳೇನಿ. ದೇವರು ಧರ್ಮಗಳನ್ನು ತಿರಸ್ಕರಿಸುವವ— ಮಗನೇ ಇರಲಿ, ಯಾರೇ ಇರಲಿ— ಏನಿದ್ದರೂ ನಾನು ತಡಕೊಳ್ಳೋದಿಲ್ಲ.

**ವಿರೂಪಾಕ್ಷಯ್ಯ**: ರಾಯರೇ, ಮಾಧವರಾಯs ಹೊಲೆಗೇರಿ ಹೋಗೋದಷ್ಟೇ ಅಲ್ಲ; ಅವರನ್ನು ಎಗ್ಗಿಲ್ಲದೆ ಮುಟ್ಟತಾನೆ, ಬೇನೆ ಬೇಸರಿಕೆ ಆದವರಿಗೆ ಕೈಮುಟ್ಟಿ ಉಪಚಾರ ಮಾಡತಾನೆ. ಮತ್ತೆ ಅವರ ಹೆಂಡಿತಿ— ಸೀತಕ್ಕನೂ ಗಂಡನ ಹೆಜ್ಜೆಯಲ್ಲೇ ಹೆಜ್ಜೆ ಹಾಕತಾಳೆ. ಈಗ ಮಡಿನೀರಿಗೆ ಅಂತ ಬಂದಿದ್ದಳು; ಹೊಲೆಯರ ಸಂಗಡ ಮಾತಾಡತಾ ನಿಂತುಕೊಂಡು ಬಿಟ್ಟಿದ್ದಳು. ಧರ್ಮ ಹಾಳಾಗತದಲ್ಲs ಅಂತ ನಮಗ ಚುರುಚುರು ಅನಿಸಿತು. ಬುದ್ಧೀ ಮಾತು ಹೇಳ್ಲಿಕ್ಕೆ ಹೋದರೆ ನಮಗೇ ಬಾಯಿಗೆ ಬಲ್ಲಂತೆ ಅಡಿಬಿಟ್ಟಳು. ನಿಮಗೆ ಇದೆನ್ನೆಲ್ಲ ತಿಳಿಸದೆ ಇದ್ದರೆ ದೈವದ್ರೋಹ ಆದೀತಲ್ಲಾ ಅಂತ...

**ಶ್ರೀನಿವಾಸ**: (ಕೋಪ ತಡೆಯದಂತಾಗಿ ನಡುವೆಯೇ) ತಿಳಿಸಿದ್ದು ಒಳ್ಳೇದು ಮಾಡಿದಿರಿ. ಮಡಿ ನೀರಿಗೆ ಹೋದಾಗ ಹೊಲೆಯರ ಸಂಗಡ ಮಾತಾಡಿದಳೇ?

**ಕಾಳಾಚಾರಿ**: (ಉರಿಯಲ್ಲಿ ಸೆದೆ ಸುರಿಯುವಂತೆ) ನಿಮ್ಮದು ಕಾಣದ ಕಣ್ಣು ರಾಯರೇ! ಅದೇ ಮೈಲಿಗೆ ನೀರಿನಿಂದ ದೇವರಿಗೆ ಅಭಿಷೇಕ ಮಾಡಿಬಿಡತೀರಿ. ಹೀಂಗ ಆದರೆ, ದೇವರು ಧರ್ಮ ಹ್ಯಾಂಗ ಉಳಿದೀತು; ಹೇಳ್ರೀ?

ಶ್ರೀನಿವಾಸ : ಹರಿ ಹರಿಃ! ಈ ಹುಡುಗ ಮುಂಡೆ ಮುಪ್ಪಿನ ಕಾಲದೊಳಗ ನನ್ನ ಮುಖಕ್ಕೆ ಮಸಿ ಹಚ್ಚುತವೆ, ಆಯ್ತು.

ಶಂಕರ : ಈ ಮಾತು ಇಷ್ಟಕ್ಕೇ ಉಳಿದಿದ್ದರೆ ಅಡ್ಡೀ ಇಲ್ಲ. ಇವರನ್ನು ಹಾಗೇ ನಡಿಲು ಬಿಟ್ಟರೆ, ಹೆಡೆ ಬಿಚ್ಚಿದ ಹಾವಿನಂತೆ, ಕಂಡವರ ಮೈಮೇಲೆ ಏರಿ ಹೋಗತಾರೆ. ಆ ಮೇಲೆ ಆ ಸುದ್ದಿ ಶ್ರೀಗಳ ತನಕಾನೂ ಹೋಗತದೆ. ಮುಂದಿನ ಪರಿಣಾಮ ನಿಮಗೆ ಗೊತ್ತೇ ಅದ. ಆ ಘಟ್ಟಕ್ಕ ಬರಬಾರದು ಅಂತ ನಿಮಗೆ ತಿಳಿಸಬೇಕಾಯ್ತು. ಬರತೇವಿನ್ನು, ಮತ್ತ ಸ್ನಾನಕ್ಕೆ......!

ಶ್ರೀನಿವಾಸ : ಹೋಗಬೇಡಿರಿ. ದೇವರು ಧರ್ಮಗಳಿಗೆ ನೀರು ಬಿಡೋ ಮಗ-ಸೊಸೆ ನನ್ನ ಮನೆಯಲ್ಲಿ ಇರಲಿಕ್ಕಾಗದು. ಏನಿದ್ದದ್ದೂ ನಿಮ್ಮ ಕಣ್ಣಿದಿರಿಗೇ ಆಗಲಿ. (ಸೀತೆ ಕೊಡವನ್ನು ಹೊತ್ತುಕೊಂಡು ರಂಗದ ಮೇಲೆ ಬರುವಳು) ಸೀತಾ, ಇಡು ಅಲ್ಲೇ ಕೊಡಪನ್ನು. (ಸೀತೆ ತ್ರಿಮೂರ್ತಿಗಳನ್ನು ನೋಡುತ್ತ ಹಾಗೆಯೇ ನಿಲ್ಲುವಳು.) ಇಡು ಅಂದೆ ಕೊಡಃ. (ಸೀತೆ ಇಡುವಳು) (ರಾಯರು ಹಿರಿತನದ ದರ್ಪದಲ್ಲಿ) ಮಡಿ ನೀನು ತರೋದು ಇಷ್ಟು ತಡ ಯಾಕೆ?

ಸೀತಾ : ಗಡೆಗಡೆ ಬಿಡುವು ಇರಲಿಲ್ಲ. ಅಲ್ಲಿದ್ದವರು ಜಗ್ಗೋ ತನಕ......

ಶ್ರೀನಿವಾಸ : ಅಲ್ಲಿದ್ದವರು ಅಂದರೆ ಯಾರು ? ಎಲ್ಲಾರು ಹೊಲೇರೇ ಹೌದಲ್ಲೋ ?

ಸೀತಾ : ಇವರೂ ಅಲ್ಲೇ ಇದ್ದರು...! (ಕೆಣಕುವಂತೆ ಮುಗುಳು ನಗುವಳು).

ಶ್ರೀನಿವಾಸ : ಇದ್ದರು ಅಂತಲೇ ಎಲ್ಲಾ ಹೇಳಿದ್ದಾರೆ. ಆ ಹೋಲೇರ ಬೆನ್ನು ಕಟ್ಟಿ ಈ ಮಡಿವಂತರಿಗೆ ಸಿಕ್ಕ ಸಿಕ್ಕಂತೆ ಮಾತಾಡ ಬೇಕೇನು ನೀನು ? ಇಂಥವರ ಸೊಸೆ ಅಂತೆ, ಹೊಲೆಯರನ್ನು ಮುಟ್ಟ ತಾಳಂತೆ, ಅವರ ಪಕ್ಷ ಕಟ್ಟಿ ಸ್ಪೃಶ್ಯ ಜಾತಿಯವರಿಗೆ ಬಾಯಿಗೆ ಬಲ್ಲ ಹಾಗೆ ಮಾತಾಡತಾಳಂತೆ... ಅಂದರೆ ನಮ್ಮ ಮನೆತನದ ಮರ್ಯಾದೆ ಮಣ್ಣು ಗೂಡಲಿಕ್ಕಿಲ್ಲೇನು ?

ಸೀತಾ : ನಾನೇನೂ ಹರಿಜನರನ್ನು ಮುಟ್ಟಿಲ್ಲ. ಅವರು ನನಗಿಂತ ಮೊದಲು ಅಲ್ಲಿಗೆ ಬಂದಿದ್ದರು. ಮೊದಲು ಬಂದವರು ಮೊದಲಿಗೆ ಕೆಲಸ ಮಾಡಿಕೊಳ್ಳಬೇಕು ಅನ್ನೋದು ವ್ಯವಹಾರದ ನೀತಿ, ಸಮಾಜದ ನೇಮ....

ಶ್ರೀನಿವಾಸ : ಒಳ್ಳೇ ಪೌರನೀತಿ ಕಲಿಸಲಿಕ್ಕೆ ಹೊರಟೇಯಲ್ಲ ! ಈ ಮಡಿವಂತರು ಮೈಲಿಗೆ ಆದೀತು ಅಂತ ಅವರನ್ನು ಹಿಂದಕ್ಕೆ ಅಟ್ಟಿದ್ದರಂತೆ. ನೀನೇ ಅವರನ್ನು ಮುಂದಕ್ಕೆ....(ತೇಕುತ್ತ) ಹುಚ್...(ತೇಕುತ್ತ ನಿಲ್ಲುವ.)

ಸೀತಕ್ಕ : ಈ ಮಡಿವಂತರು ಬಾವಿಯಿಂದ ಮೂರು ಮಾರು ದೂರ ಸ್ನಾನ ಮಾಡುತಿದ್ದರು. ಹರಿಜನರ ಸಿಡಿ ನೀರು ಕೂಡ ಅಷ್ಟು ದೂರ ಹೋಗುತಿದ್ದಿಲ್ಲ. ಇವರಿಗೆ ಮೈಲಿಗೆ ಹೇಗೆ ಆಗುತಿತ್ತೋ ನಾ ಕಾಣೆ.

ಶ್ರೀನಿವಾಸ : ನಾಕಾಣೇನೋ ಅಯ್ದಾಣೇನೋ ! ಮೇಲಿನ ಜಾತಿಯವರಿಗೆ, ಈ ಹೊಲೇರ ಮುಖಽ ನೋಡಿದರೆ ನಾಕು, ಮೈಲಿಗೆ ಆಗತದೆ. ಹಂಽಽ.

ಸೀತಕ್ಕ : (ಕಿಡಿಗೇಡಿತನದ ದನಿಯಲ್ಲಿ). ಮೈಲಿಗೆ :ಆದರೆ ಮತ್ತೆ ನಾಲ್ಕು ಕೊಡ ನೀರು ಹಾಕ್ಕೊಳ್ಳಿಕ್ಕೆ ಬಾವೀನೂ ಸಮೀಪದಲ್ಲಿಯೇ ಇತ್ತು.........ಇವರ ಸ್ನಾನವೂ ಮುಗಿದಿದ್ದಿಲ್ಲಽಽ......

ಕಾಳಾಚಾರಿ : ನೋಡಿದಿರಾ ರಾಯರೇ, ನಿಮ್ಮ ಇದಿರಿಗೇ ಹ್ಯಾಗೆ ಚುಚ್ಚಿ ಮಾತಾಡತಾರೆ ನಮಗೆ ? ಅಂದ ಮೇಲೆ, ಅಲ್ಲಿ ನಮಗೆ ಏನೇನು ಅಂದಿದ್ದಾರು ಅನ್ನೋದನ್ನ ನೀವೇ ತಿಳಕೊಳ್ಳಿರಿ.

ಸೀತಕ್ಕ : ನಾನೇನು ಅಲ್ಲವಾದದ್ದನ್ನು ಆಡಿದ್ದು ? ಸಾರ್ವಜನಿಕ ಬಾವಿ ಅದೆ; ನೀವು ಜಳಕಕ್ಕೆ ಒಗೆಯೋದಕ್ಕೆ ಅಡಿಗೆಗೆ ಓತಣಕ್ಕೆ ಬೇಕಾದಷ್ಟು ನೀರು ಒಯ್ಯುತೀರಿ. ಪಾಪ ! ಆ ಬಡವರು ಕುಡಿಯೋ ಮಟ್ಟಿಗಾದರೂ ನೀರು ಒಯ್ಯಲಿ, ಅಂತ ಹೇಳಿದೆ. ಇದರಲ್ಲಿ ಅಲ್ಲದ್ದೇನು ಆಡಿದೆ ?

ಶಂಕರ : ಹರಿ ಹರೀಽಽ ! ಎಂಥಾ ಕಾಲ ಬಂತಲ್ಲಾಽಽ ! ಮಾವಂದಿರ ಹೆದರಿಕೆ ಇಲ್ಲದಂತೆ ಅವರಿದಿರಿಗೇ ನಿಂತು ಸೊಸೆಯಂದಿರು ಮಾತಾಡತಾರೆಂದರೆ......ಹರಿ ಹರೀಽ !!

ಸೀತಕ್ಕ : ನೀವು ಬಂದು ಇದ್ದದ್ದು ಇಲ್ಲದ್ದು ಉಪ್ಪುಕಾರ ಬೆರೆಸಿ ಹೇಳಿದಾಗ, ನಾನು ಸುಮ್ಮನೆ ಇದ್ದರೆ ನನ್ನ ತಲೆ ಹೋಗೋ ಹೊತ್ತು ಬಂದೀತು.

ಶ್ರೀನಿವಾಸ : ಇದ್ದದ್ದು ಇಲ್ಲದ್ದು ಅಂತೆ ! ಹುಚ್ಚು ಮುಂಡೇ...! ಅವರು ಯಾರು ಅಂತ ತಿಳಿದಿದ್ದೀ ?

ಸೀತಕ್ಕ : (ಕಿಡಿಗೇಡಿ ದನಿಯಲ್ಲಿ) ಈಗ ಅವರೇ ಅಂದರಲ್ಲ, ಹರಿ ಹರಿ ಅಂತ. ಅಂದ ಮೇಲೆ, ಅವರೂ ಹರಿಜನ ಅಂಥಾಂಗಾಯ್ತು.

ಶಂಕರ : ಹಾಽಽಂ ! ಸೀತಕ್ಕಾ, ಬಾಯಿ ಬಿಗಿ ಹಿಡಿದು ಮಾತಾಡು. ನಮಗ ಹರಿಜನ ಅಂತೀಯಾ ?

ಸೀತಕ್ಕ : ನೀವೇ ಅಂದುಕೊಂಡದ್ದನ್ನು ನಾನು ಹೇಳಿದರೆ, ನಾನೇ ಅಂದಂತೆ ಆಯ್ತೇನು ? ದೀಕ್ಷಿತರೇ, ಮಾತೆತ್ತಿದರೆ ಹರಿ ಹರಿ ಅಂತೀರಿಽಽ; ಮತ್ತೆ ಆ ಹರಿಜನ ಅಂದರೆ ಸಿಟ್ಟು ಯಾಕೆ ನಿಮಗೆ ? ತೋರಿಕೆಗೆ ದೇ-ವ-ರ ಹೆ-ಸ-ರು......(ಮುಗುಳು ನಗುವಳು).

ವಿರೂಪಾಕ್ಷಯ್ಯ : ಬರತೇವಿ ರಾಯರೇ ! ಮನೇ ಹಿರಿಯರು, ಊರಿನ ಸರಪಂಚರು ಅಂತ ಹೇಳಿಕ್ಕೆ ಬಂದರೆಽ ಒಳ್ಳೇ ಸಂಭಾವನೆ ಕೊಡಿಸಿದಿರಲ್ಲ, ಸೊಸೆಯ ಕಡೆಯಿಂದ ! ನಡೀರಿ ದೀಕ್ಷಿತರೇ......

ಶ್ರೀನಿವಾಸ : ಸಿಟ್ಟಾಗ ಬೇಡಿರಿ ಅಯ್ಯನೋರೇ; ನಿಮ್ಮನ್ನು ಬಿಟ್ಟು ನಾನಿದ್ದೇನೇನು ? ಸೀತಾ, ತಪ್ಪಾಯ್ತು ಅಂತ ಅವರ ಕ್ಷಮಾ ಕೇಳಿಕೋ; ಅವರ ಇದಿರಿಗೆ ಗಲ್ಲಽ ಗಲ್ಲಽ ಬಡಕೋ, (ಸೀತೆ ಸುಮ್ಮನೆ ನಿಲ್ಲುವಳು.) ಹುಽಂ, ಕ್ಷಮಾ ಕೇಳ್......

ಸೀತೆ : ನನ್ನ ತಪ್ಪು ನನಗೆ ತಿಳಿಸಿಕೊಟ್ಟರೆ......

**ಶ್ರೀನಿವಾಸ :** ತಿಳಿಸಿಕೊಟ್ಟರಿ, ಅಂತೆ ! ಹೊಲೇರ ಕೂಡ ಹೊಕ್ಕು ಬಳಕೇ ಮಾಡಿದ್ದು, ಮಾಡೋದು ತಪ್ಪಲ್ಲೇನು ?

(ಅದೇ ಹೊತ್ತಿಗೆ ಮಾಧೂ ಬರುವ.)

**ಮಾಧವ :** ಹೊಲೆಯರೆಂದರೆ ಯಾರು ಅಂತ ತಿಳಿದಿದ್ದೀರಿ, ಅಪ್ಪಾ?

**ಶ್ರೀನಿವಾಸ :** ಬಾ, ಬಾ; ನೀನೂ ಇದೇ ಸಮಯಕ್ಕೆ ಬಂದದ್ದು ಒಳ್ಳೇದೇ ಆಯ್ತು. ನೀನು ದಿನಾಲು ಹೊಲಗೇರಿ ಹೊಕ್ಕು, ಅವರ ಮನೇ ಒಳಗ ಬೇನೆ ಬೇಸರಕೆ ಬಂದವರ ಉಪಚಾರ ಕೈಮುಟ್ಟಿ ಮಾಡುತೀ-ಅಂತ ಈ ಸದ್ಗೃಹಸ್ಥರು ಹೇಳುತಾರೆ......ಹೌದೇನು ?

**ಮಾಧವ :** ನಾನು ಹರಿಜನ ಮನೇ ಒಳಗ ಕೆಲಸ ಮಾಡೋದನ್ನ ಇವರು ಯಾವಾಗ ನೋಡಿದರಂತೆ ? (ತ್ರಿಮೂರ್ತಿಗಳು ಕಕ್ಕಾವಿಕ್ಕಿ ಯಾಗುವರು.)

**ಶ್ರೀನಿವಾಸ :** ಅವರು ಯಾವಾಗರೇ ನೋಡಿರಲಿ; ನೀನು ಹೊಲೆ ಗೇರಿ ಹೊಕ್ಕದ್ದು ಹೌದೋ ಅಲ್ಲೋ ?

**ಮಾಧವ :** ನಾನು ಹೊಲೆಗೇರೀ ಹೊಕ್ಕಿಲ್ಲ; ಹರಿಜನರ ಕೇರಿಗೆ ಹೋದದ್ದು ನಿಜ.

**ಶಂಕರ :** ರಾಯರೇ, ಆ ಹರಿಜನರಿಗೇ ಅನ್ನೋದು, ಹೊಲೆಯರು ಮಾದರು, ಅಸ್ಪೃಶ್ಯರು......ಅಂತ.

**ಮಾಧವ :** ಹೀಗೇನು ? ಹೊಲೆಯರು ಅಂದರೆ ನನ್ನ ತಿಳಿ ವಳಿಕೆಯೇ ಬೇರೆ ಇತ್ತು. (ತೆರೆಯಲ್ಲಿ—ಹೊಲೆಯ ಹೊರಗಿಹನೆ ಊರೊಳ ಗಿಲ್ಲವೇ—ಎಂಬ ಪದದ ಪಲ್ಲವಿ.)

**ಶಂಕರ :** (ನುಂಗುವ ತುತ್ತಿನಲ್ಲಿ ನುಸಿಯನ್ನು ಕಂಡವನಂತೆ) ರಾಯರೇ, ಎಲ್ಲಿ ಹೋದರೂ ಈ ಹೊಲೆಯರು ನಮ್ಮ ಬೆನ್ನು ಬಿಡೋ ಹಾಗೆ ಕಾಣೋದಿಲ್ಲ. ಏನಸ, ಹೊಡೆದು ಕಳಿಸಿರೋ ಆ ಹೊಲೆ ದಾಸನ್ನಸ,

**ಮಾಧವ :** (ಉತ್ತೇಜಿತನಾಗಿ ದಾಸಯ್ಯನ ಕಡೆ ನೋಡುತ್ತ) ಬಾ ಬಾ ನನ್ನ ದೊರೆ, ಮುಂದಕ್ಕೆ ಬಾ. (ಅವನನ್ನು ಕೈಮುಟ್ಟಿ ಕರೆತರುವ) ಹೇಳು, ಹೇಳು ಆ ಪದವನು .

**ಕಾಳಾಚಾರಿ :** ಏನು ಹೇಳತಾನೆ ತನ್ನ ತಲೆ! ಎಲ್ಲಾರೂ ತನ್ನಂತೆ ಹೊಲೇರು ಅಂತ ಹೊಂಡ್ಕೋತಾನ, ಆಯ್ತು. ಹೊಟ್ಟೇಕಿಚ್ಚು ಮುಂಡೇ ಮಕ್ಕಳಿಗೆ.

**ಮಾಧವ :** ನಿಜ, ನಿಜ; ಆದರೆ, ಅದು ನೀವು ಹೇಳುವಂತೆ, ಮೇಲಿನ ಜಾತಿಯವರು ಹರಿಜನರ ಮೇಲೆ ಹರಿಹಾಯುವ ಜಾತೀಯತೆಯ ಜಂಭದ ಹೊಟ್ಟೇಕಿಚ್ಚಲ್ಲ; ನಮ್ಮೆಲ್ಲರ ತಿರಸ್ಕಾರದಿಂದಾಗಿ ಅವರಿಗೆ ಬಂದಿರುವ ಬಡ ತನದಲ್ಲಿ ಕೂಳಿಲ್ಲದೆ ತಳಮಳಿಸುವ ಹೊಟ್ಟೆಯುಕಿಚ್ಚು ಅದು! ಕೇಳಿರಿ, ಅವರು ಹೇಳೋದನ್ನು.

**ಶಂಕರ :** ರಾಯರೇ, ಏನಾದರೂ ಹಾಕಿ ದಬ್ಬಿಬಿಡಿರಿ ಅವನನ್ನು. ಕೆಲಸಕ್ಕ ಕಾಣದೆ ಬಾಯಿಗೆ ಬಂದದ್ದನ್ನು ಭಕಾಯಿಸತಾನೆ...

**ಮಾಧವ :** ದೀಕ್ಷಿತರೇ, ಬಾಯಿಗೆ ಬಂದದ್ದು ಭಕಾಯಿಸಲಿಕ್ಕೆ, ಅವನು ಕೋರ್ಟಿನೊಳಗೆ ದೇವರ ಆಣೆ ಮಾಡಿ ಸುಳ್ಳು ಹೇಳ್ಲಿಕ್ಕೆ ನಿಂತಿಲ್ಲ. ದುಡ್ಡು ಸಿಕ್ಕರೆ ಸಾಕು, ಸಿಕ್ಕಂತೆ ಸುಳ್ಳು ಹೇಳುವಷ್ಟು ಅವನ ಬುದ್ಧಿಯೂ ಚುರುಕಾಗಿಲ್ಲ. ನಮ್ಮೆಲ್ಲರಿಗೂ ಪೂಜ್ಯರಾದ ಪುರಂದರದಾಸರ ಪದವನ್ನು ಹೇಳುತಿದ್ದಾನೆ. ಕೇಳಿಯಾದರೂ ಕೇಳಿರಿ. ಹೇಳು ನನ್ನ ರಾಜಾ, ಹೇಳು ಪದವನ್ನು, ಬೆದರಬೇಡ.

**ದಾಸಯ್ಯ :** ಪದ—ದೇಸ— ತಾಳ—ಝಂಪಾ

ಹೊಲೆಯ ಹೊರಗಿಹನೆ ಊರೊಳಗಿಲ್ಲವೇ?

ಶ್ರೀ ಹರಿಯ ಸ್ಮರಣೆಯನು ಬಲ್ಲವರು ಪೇಳಿ ॥ಪಲ್ಲ॥

**ಮಾಧವ:** ಮೇಲು ಮಾತಿಗೆ ಹರಿಯ ನೆನೆಸುವರು ಹೇಳಿ॥(ರಾಗದಿಂದ)

**ದಾಸಯ್ಯ :** ಆಳಾಗಿ ಅರಸಂಗೆ ಕೇಡು ಬಗೆಯುವ ಹೊಲೆಯ।

ಸೂಳೆಯನು ಕಾಮಿಸುವ ಶುದ್ಧ ಹೊಲೆಯ ॥

( ದೀಕ್ಷಿತ ಬೇರೆ ಕಡೆಗೆ ಮುಖ ತಿರುಹಿ ನಿಲ್ಲುವನು )

**ಮಾಧವ :** ಹಾಃ ಹಾಃ ಹಾ! ಹೊಲೆಯ ಸೂಳೆಯನು ಕಾಮಿಸುವ...ಹಾ ಹಾ ಹಾ! ದೀಕ್ಷಿತರೇ, ಕುಂಬಳಕಾಯಿ ಕಳ್ಳ ಅಂದ ಕೂಡಲೆ

ಹೆಗಲ ಮುಟ್ಟಿ ನೋಡಿಕೊಳ್ಳೋ ಹಾಗೆ ಮಾಡತೀರಲ್ಲ! ಈ ಕಡೆ ಮುಖ ತಿರುವಿ ಕೇಳಿರಿ.

**ದಾಸಯ್ಯ :** ಆಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ ।
ಸೂಳೆಯನು ಕಾಮಿಸುವ ಶುದ್ಧ ಹೊಲೆಯ ।
ಉಂಡಮನೆಗೆರಡನ್ನು ಬಗೆಯುವಾತನೆ ಹೊಲೆಯ ।
ಹುಸಿಯ ಬೊಗಳುವನೊಬ್ಬ ಹುಚ್ಚು ಹೊಲೆಯ ॥೧॥

( ವಿರೂಪಾಕ್ಷಯ್ಯ ಮೋರೆ ತಿರುವುವನು. )

**ಮಾಧವ :** ( ಅಯ್ಯನವರನ್ನು ನೋಡುತ್ತ ) ಪಾಪ, ಪಾಪ! ಪುರಂದರ ದಾಸರ ಕಾಲಕ್ಕೆ ಕೋರ್ಟು ಕಚೇರಿ ಇರಲಿಲ್ಲವೇನೋ! ಇದ್ದಿದ್ದರೆ —

(ರಾಗವಾಗಿ) ಕೋರ್ಟಿನಲಿ ಹುಸಿವವನು ಹುಚ್ಚು ಹೊಲೆಯಽಽ ಎಂದು ಹಾಡಬಹುದಾಗಿತ್ತಲ್ಲವೇ ಸ್ವಾಮಿಗಳೇ?

**ದಾಸಯ್ಯ :** ಆನೆ ಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ ।

**ಮಾಧೂ :** (ನಗುತ್ತ) ಸೋನಾರ ಅವರ ಹಾಗೆ... (ಕಾಳಾಚಾರಿ ಮುಖ ತಿರುಗಿಸುವ) ಕೇಳಿರಿ ಕಾಳಾಚಾರೀ...!

**ದಾಸಯ್ಯ :** ಆಸೆ ಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ ।
ಲೇಸು ಉಪಕಾರಗಳ ಮಾಡದವ ಹೊಲೆಯ ।
ಅರಿತು ಆಚಾರಗಳ ನಡೆಸದಾತನೆ ಹೊಲೆಯ ।
ಪರಸತಿಗೆ ಅಳುಪಿದವ ಪಾಪಿ ಹೊಲೆಯ ॥ ೨ ॥

**ಶಂಕರ :** ರಾಯರೇ, ಇದೂ ನಿಮ್ಮ ಮಾಧವರಾಯರ ಕೈವಾಡವೇ ಕಾಣತದೆ. ನಾವಿಲ್ಲಿ ಇರತೇವಿ ಅನ್ನೋದನ್ನು ತಿಳಿದು, ಆ ಹೊಲೆದಾಸನಿಗೆ ಇಲ್ಲಿ ಬರಲಿಕ್ಕೆ ಹೇಳಿದ್ದಾರೆ.

**ಮಾಧವ :** ಬಹಳ ಸೂಕ್ಷ್ಮದೃಷ್ಟಿ ದೀಕ್ಷಿತರದು. ನೀವು ಇಲ್ಲೇ ಇದ್ದರೂ ಹೊಲೆಗೇರಿ ಸದಾ ನಿಮ್ಮ ಕಣ್ಣಿಗೆ ಕಾಣುತಲೇ ಇರತದೆ; ಅಲ್ಲವೇ?

**ವಿರೂಪಾಕ್ಷಯ್ಯ :** ನೋಡಿದಿರಾ ರಾಯರೇ, ಈ ಉದ್ಧಟತನದ ಮಾತು !

**ಮಾಧವ :** ಉದ್ದ ಹಟ ಯಾರದು ಅನ್ನೋದನ್ನ ಅಪ್ಪಾಜಿಯವರೇ ಹೇಳಲಿ.

**ಶ್ರೀನಿವಾಸ :** ಮಾಧೂ, ಲೌಕಿಕ ಆಚಾರದೊಳಗೆ ಹಿರಿಯರು ಅನಿಸಿಕೊಂಡ ಈ ಸದ್ಗೃಹಸ್ಥರು ಕಾಣೋದೇ ಇಲ್ಲೇನು, ನಿನ್ನ ಕಣ್ಣೊಳಗೆ?

**ಮಾಧವ :** ಕಾಣತಾರೆ; ಆದರೆ ಇನ್ನೂ ಚೆನ್ನಾಗಿ ನೋಡಬೇಕಾಗೇದ.

**ದಾಸಯ್ಯ :** ರಾಯರ್ರ, ಈ ಬಡವಗೇನಾದರೂ ಉಪಕಾರ ಮಾಡ್ರೀ, ಹೋಕ್ಕೇನಿ.

**ಶ್ರೀನಿವಾಸ :** ಉಪಕಾರ್ರ ಮಾಡಲಿಲ್ಲ ಅಂದರೆ...... ?

ಲೇಸು ಉಪಕಾರಗಳ ಮಾಡದವ ಹೊಲೆಯ್ರ
ಅಂತ ಮತ್ತೆ ನಮನ್ನು ಬೀದೀರಂವು ಮಾಡುತೀ ಹೌದಲ್ಲೋ?

**ದಾಸಯ್ಯ,** ಹೆಚ್ಚಿನ ಜಾತೇರಿಗೆ ಹಾಂಗಂದು ಬದುಕೇವ್ರೇ ನಾವು?

**ಶಂಕರ :** ಬದುಕ್ರ, ಬ್ಯಾಡಾದರ ಸಾಯಿ; ನಮಗೇನು ಹೇಳತೀ? ಈಗ ಮುಂದಕ್ಕೆ ಹೋಗು; ಮಡೀಲಿದ್ದೇವಿ; ಮತ್ತೊಮ್ಮೆ ಬಂದೀಯಂತೆ.

**ದಾಸಯ್ಯ :** (ತಿರುಗುತ್ತ) ನೀಚ ಮಾನವರಿಗೆ ಸಿರಿಬಂದರೇನು ।
ಈಚಲ ಮರದೊಡ್ಡ ನೆರಳಾದರೇನು ॥

(ಎಂದು ಹಾಡುತ್ತ ಹೋಗುವನು.)

**ಕಾಳಾಚಾರಿ :** ಏ, ಒದೀರೋ ಅವನ್ನ, ಇದಿರಿಗೇ ಬಯ್ದು ಹೋಗುತಾನೆ.

**ಮಾಧವ :** (ಅಣಕದಿಂದ) ಹಾಗಂತ ಒದ್ದೀರಿ ಮತ್ತೆ! ಅವ ಹೊಲೆಯರವ, ಮುಟ್ಟಬಾರದವ; ಸಿಟ್ಟಿನ ಭರದೊಳಗೆ ಒದ್ದು ಮೈಲಿಗೇ ಮಾಡಿಕೊಂಡೀರಿ್ರ ! ಯಾಕಂದರೆ ನಿಮ್ಮದು ಮೇಲಿನ ಜಾತಿ ! ದೀಕ್ಷಿತರೇ, ಪಶು ಪಕ್ಷಿಗಳನ್ನು,—ನಾಯಿ ನರಿಗಳನ್ನು—ಕಾಗೆ ಗೂಗೆಗಳನ್ನು—ಮುಟ್ಟತೀರಿ; ಬೇಕು ಅಂದಾಗ ಹೊಲೆಸೂಳೆಯರ ಸಂಗಡ ಚೆಕ್ಕಂದ ಆಡ

ಕೀರಿಸ್ರಿ. (ದೀಕ್ಷಿತ ಶೌಚಾರಿ ನೋಡುವ). ಅಲ್ಲ, ನಿಮ್ಮ ಮಾತು ಅಂತ ಹೇಳಲಿಲ್ಲ; ನಾಮಮಾತ್ರರ ರೀತಿ ನೀತಿ ಹೇಳತೇನಿ—ಈ ಹರಿಜನ ಗಂಡಸ ರನ್ನ ಮುಟ್ಟಿದರೆ ನಿಮ್ಮ ಜಾತಿ ರವದೆಗಿಂತ ಹಗುರಾಗಿ ಹಾರಿ ಹೋಗ ತ್ತದಲ್ಲ ?

ಶ್ರೀನಿವಾಸ : ಮಾಧೂ ತಲೆಗಿಲೆ ಕೆಟ್ಟದೇನು ನಿಂದು ? ಜಾತಿ ಎಲ್ಲಾ ಕೂಡಿಸಿ ಬಿಡಬೇಕಂತೀಯಾ ?

ಶಂಕರ : ವರ್ಣ ಸಂಕರ ಮಾಡುತಾರೆ, ತೀರಿತು.

**ಮಾಧವ :** ಏನದು ದೀಕ್ಷಿತರೇ, ವರ್ಣಸಂಕರ ಅಂದರೆ ?

ದೀಕ್ಷಿತ : ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ—ಅಂತ ಶ್ರೀಕೃಷ್ಣ ಪರಮಾತ್ಮ ಹೇಳಿದ್ದಾನೆ. ತಿಳೀತ್......

**ಮಾಧವ :** ಅಲ್ರೀರಿ, ಚಾತುರ್ವರ್ಣ್ಯ ಹೇಳೋದರೊಳಗೇ ನಿಮ್ಮ ಅಚಾತುರ್ಯ ತೋರಿಸತೀರಲ್ಲ ! ನಾನು 'ವರ್ಣಸಂಕರ' ಅಂದರೇನು ಅಂತ ಕೇಳತೇನಿ; ವರ್ಣ ಎಷ್ಟು ಅಂತ ಕೇಳಿಲ್ಲರಿ.

**ಶಂಕರ :** ಗುಣ ಕರ್ಮ ವಿಭಾಗಶಃ, ಅಂತ ಹೇಳಿದ್ದಾನೆ ಪರಮಾತ್......

**ಮಾಧವ :** (ನಗುತ್ತ) ಅರೇರೇರೇ ! ಮಾತನಾಡಲಿಕ್ಕೆ ಬಾರದ ದೇಶಭಕ್ತರು, ಹೆಜ್ಜೆಗೊಮ್ಮೆ ಮಹಾತ್ಮಾಜಿ ಹೆಸರು ಹೇಳುತಾ ಹೊತ್ತು ಗಳೆಯೋ ಹಾಗೆ ಮಾಡುತೀರಲ್ಲ ! ಏನದು—ವರ್ಣ, ಗುಣ, ಕರ್ಮ ಅಂದರೆ......

**ಶಂಕರ :** ವರ್ಣ ಅಂದರೆ...ವರ್...ಅಂದರೆ...ಜಾತಿ; ಗುಣ... ಅಂದರೆ...ಅಂದರೆ ಗುಣ...ಸ್ವಭಾವ; ಕರ್ಮ....ಅಂದರೆ...ಕರ್..ಪಾಪ..

**ಮಾಧವ :** (ನಗುತ್ತಲೇ) ಅಲ್ರೀ, ಸಾಲೇ ಹುಡುಗರು ಕವಿತಾ ಅರ್ಥ ಹೇಳೋ ಮುಂದ ತಡವರಿಸಿಧಾಂಗ ಮಾಡತೀರಲ್ಲ. ಗುಣ ಅಂದ ರೇನು, ಕರ್ಮ ಅಂದರೆ ಯಾವುದು ? ವರ್ಣಕ್ಕೂ ಅವುಗಳಿಗೂ ಸಂಬಂಧ ವೇನು ? ಹೇಳಿಬಿಡಿರಿ.

ವಿರೂಪಾಕ್ಷಯ್ಯ : ಇಷ್ಟು ತಿಳಿಯೋದಿಲ್ಲೇನ್ರೀ ? ಗುಣ-ಕರ್ಮ ಅಂದರೆ— ಅವರವರ ಕೆಟ್ಟ ಗುಣಕ್ಕೆ ತಕ್ಕ ಕರ್ಮ ಅಂದರೆ ಪಾಪಾ ಮಾಡಿದ್ದಾರೆ ಅಂತ, ಅವರನ್ನು ಹೊಲೆ ಜಾತಿಯೊಳಗೆ-ಕರೀ ವರ್ಣದೊಳಗೆ ಹುಟ್ಟಿಸಿದ್ದಾರೆ ದೇವರು.

ಮಾಧವ : ವರ್ಣ ಅಂದರೆ ಬಣ್ಣ-ಹಾಃ ಹಾಃ ಹಾಃ ಅಯ್ಯನೋರೇ ಎಷ್ಟು ಮುಂಗಾಲ ಪುಟಿಗೇ ಹೊಡೀತೀರೀ ? ಚಾತುರ್ವರ್ಣ್ಯ ಅಂದರೆ ಏನು ಅನ್ನೋದೇ ಗೊತ್ತಿಲ್ಲ ನಿಮಗೆ...

ಶಂಕರ : (ಹಟದಿಂದ) ಗೊತ್ತಿಲ್ಲದೆ ಏನು? ಕರ್ಮ ಅಂದರೆ ಕೆಲಸ. ಅವರವರ ಕೆಲಸಕ್ಕೆ ತಕ್ಕಂತೆ, ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ ಅಂತ ನಾಲ್ಕು ವರ್ಣಗಳನ್ನು ಹುಟ್ಟಿಸಿದ್ದಾನೆ, ಭಗವಂತ! ತಿಳೀತಿಲ್ಲೋ?

ಮಾಧವ : ಅದನ್ನು ತಿಳಕೊಳ್ಳಬೇಕಾದದ್ದು ನೀವು. ನಾಲ್ಕು ವರ್ಣಗಳನ್ನೇ ಭಗವಂತ ಹುಟ್ಟಿಸಿದ್ದರೆ ಹೊಲೆಯರು ಅನ್ನೋ ಐದ್ನೇ ವರ್ಣ ಎಲ್ಲಿಂದ ತಂದಿರಿ ? ಅದನ್ನು ಭಗವಂತನ ಪ್ರತಿನಿಧಿಗಳಾದ ನೀವೇ ಹುಟ್ಟಿಸಿರಬೇಕಲ್ಲವೇ ? ಅದೂ ಹೋಗಲಿ. ಈಗ ಪರಮಾತ್ಮನ ಮಾತನ್ನೇ ನೋಡೋಣ. ಆತನೇ ಮುಂದೆ ಭಗವದ್ಗೀತೆಯಲ್ಲಿ—

ವಿದ್ಯಾ ವಿನಯ ಸಂಪನ್ನೇ । ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇಚ । ಪಂಡಿತಾಃ ಸಮದರ್ಶಿನಃ ॥

ಎಂದು ಹೇಳುತ್ತಾನೆ. ವಿಪ್ರೋತ್ತಮನನ್ನೂ ಹೊಲೆಯನನ್ನು ಎಂದರೆ ಹರಿಜನರನ್ನೂ ಸಮದೃಷ್ಟಿಯಿಂದಲೇ ನೋಡುವುದು ಬುದ್ಧಿವಂತರ ಲಕ್ಷಣ, ಎಂದು ಆತನ ಅಭಿಪ್ರಾಯ, 'ಶ್ವಪಾಕೇ' ಶಬ್ದದಿಂದ, ಆಗಲೂ ಹರಿಜನರು ಇರಬೇಕೆಂದು ತೋರುತ್ತದೆ. ಅವರನ್ನು ಶೂದ್ರರಲ್ಲಿಯೇ ಪರಿಗಣಿಸಿದ್ದಾನೆ ಪರಮಾತ್ಮ, ಎಂದು ತಿಳಿಯೋಣ. ಹೇಗಿದ್ದರೂ ಶೂದ್ರರಾದ ಹರಿಜನರನ್ನು ಮುಟ್ಟೋದಕ್ಕೆ ಆಕ್ಷೇಪ ಬರಬಾರದಷ್ಟೇ ? ಮಹಾಭಾರತದಲ್ಲಿಯಂತೂ ವ್ಯಾಸ ಮಹರ್ಷಿಗಳೇ ಹೇಳಿದ್ದಾರೆ!

ಏಕ ಏವ ಪುರಾ ವೇದಃ । ಪ್ರಣವಃ ಸರ್ವ ವಾಙ್ಮಯಃ ।
ದೇವೋ ನಾರಾಯಣೋ ನಾನ್ಯಃ । ಏಕೋಗ್ನಿರ್ವರ್ಣ ಏವಚ ॥

ವೇದಕಾಲದಲ್ಲಿ ಇದ್ದದ್ದು ಒಂದೇ ವರ್ಣ. ಅದನ್ನು ಚಾತುರ್ವರ್ಣ್ಯ ಬೋಧಕರಾದ ವ್ಯಾಸರೇ ಒಪ್ಪುತ್ತಾರೆ. ಹೀಗೆ, ಯಾವ ದೃಷ್ಟಿಯಿಂದ ನೋಡಿದರೂ—ನೀವು, 'ಅಸ್ಪೃಶ್ಯರು' ಎಂದು ಹೇಳುವ ಅಯ್ದನೆಯ ವರ್ಣದ ಹೆಸರೇ ಇಲ್ಲವಲ್ಲ ?

**ಶಂಕರ :** ಅದಕ್ಕೆ ಶಾಸ್ತ್ರದ ಆಧಾರ ಯಾಕೆ ಬೇಕು ? ಯಾರಿಗೂ ತಿಳಿಯೋ ಮಾತು ! ದುರಾಚಾರಿಗಳನ್ನು ದೂರ ಇಡಬೇಕು ಅನ್ನೋದು, ವಿಚಾರ ಸಮ್ಮತ.

**ಮಾಧವ :** ಒಪ್ಪೋಣ. ಆದರೆ, ಎಂದೋ ಒಮ್ಮೆ ಯಾವನೋ ಒಬ್ಬ ದುರಾಚಾರದೊಳಗಿದ್ದರೆ ಅವನನ್ನು ದೂರ ಇಟ್ಟಿರಬಹುದು; ಆದರೆ, ಅವನ ಮುಂದಿನ ನೂರಾರು ತಲೆಮಾರಿನ ಸಂತತಿಯನ್ನು—ದುರಾಚಾರದ ಸಂಬಂಧವಿಲ್ಲದೆ-ಅಸ್ಪೃಶ್ಯ ಅಂತ ಹೊರಗಿಡೋದು ಯಾವ ವಿಚಾರ ಸಮ್ಮತ ?

ಶೂದ್ರೋಽಪಿ ಶೀಲಸಂಪನ್ನೋ । ಗುಣವಾನ್ ಬ್ರಾಹ್ಮಣೋಭವೇತ್। ಎಂದು ವ್ಯಾಸರೇ ಹೇಳುತಾರೆ. ಈ ಹರಿಜನರೂ ಸದಾಚಾರಿಗಳಾದರೆ, ಅವರನ್ನು ಮುಟ್ಟೋದು ವಿಚಾರ ಸಮ್ಮತ, ಶಾಸ್ತ್ರಸಮ್ಮತ ಅಂಥಾಂಗಾಯ್ತು.

**ವಿರೂಪಾಕ್ಷಯ್ಯ :** (ನಗುತ್ತ) ಹೆಂಡ, ಕಂಡ ತಿಂದು ಹೊಲಸಿ ನೊಳಗೇ ಹೊರಳಾಡೋ ಹೊಲೇರು ಸದಾಚಾರಿಗಳಾಗುತಾರೆಯೇ?( ಮತ್ತೆ ಅಪಹಾಸ್ಯ.)

**ಮಾಧವ :** (ಮರ್ಮಕ್ಕೆ ಪೆಟ್ಟು ಬಿದ್ದವನಂತೆ) ನಗಬೇಡಿರಿ ಅಯ್ಯ ನೋಡೀ! ಬಸವಣ್ಣನವರ ಕಾಲಕ್ಕೆ ಮಾದಾರ ಚೆನ್ನಯ್ಯ,ಡೋಹರ ಕಕ್ಕಯ್ಯ, ಹರಳಯ್ಯ ಅಂತ ಶಿವಶರಣರಾಗಲಿಲ್ಲವೇ? ಅವರನ್ನು ಕುರಿತು ಅಣ್ಣನವರೇ-

ವಚನ — ರಾಗ ತಾಳ

ಅಪ್ಪನು ನಮ್ಮ ಮಾದಾರ ಚೆನ್ನಯ್ಯ ।
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ ।
ಚಿಕ್ಕಯ್ಯ ನೆಮ್ಮಯ್ಯ ಕಾಣಯ್ಯ ।
ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ ।
ಎನ್ನನೇತಕ್ಕರಿಯರಿ ಕೂಡಲಸಂಗಯ್ಯ ॥

ಎಂದು ಹೇಳುತಾರೆ. ಅವರ ವಚನ ಸಾಗರದೊಳಗೆ ಇಂಥ ಅಣಿಮುತ್ತು...

ಕಾಳಾಚಾರಿ : ( ನಡುವೆಯೇ ) ರಾಯರೇ, ಶಾಸ್ತ್ರದ ಮಾತು ಹೇಳುತಾ ಹೋದರೆ ಸಂಸಾರ ಸಾಗಲಿಕ್ಕೇ ಇಲ್ಲ. ಲೋಕಾಚಾರವೇ ನಮ್ಮ ದೇವರು-ಧರ್ಮ ಎಲ್ಲವೂ. ಅದಕ್ಕೆಂತಲೇ ಹೇಳೇದ ಶಾಸ್ತ್ರಾತ್ ರೂಢಿ (ಏರುದನಿಯಲ್ಲಿ) ಬಾಲಾಗಸೀ ಅಂತ! (ದೀಕ್ಷಿತ ಕಾಳಾಚಾರಿಯನ್ನು ಚಿವುಟಿ ಸನ್ನೆ ಮಾಡುವನು. ಕಾಳಾಚಾರಿ ಹಾರಿಬಿದ್ದು.- (ದೀಕ್ಷಿತರಿಗೆ) ಯಾಕ್ರೀ ತಪ್ಪೇತೇನು ಹೇಳದ್ದು—ಎಂದು ಕೇಳುವನು.)

ಸೀತಕ್ಕ : ಹಾ ಹಾ ಹಾ ಹಾ ಹಾ! ಬಾಲಾಗಸೀಽಽ! ಹಾ ಹಾ ಹಾ ಹಾ! ಬಾಲ್....

ಮಾಧವ : (ಕನಿಕರದ ದನಿಯಲ್ಲಿ) ನಗಬೇಡ ಸೀತೇ, ಸಮಾಜದ ಹಿರಿಯ ಮುಂದಾಳುಗಳ ಇಂಥ ಅಜ್ಞತನಕ್ಕಾಗಿ ನಾವು ನಗಬಾರದು; ಮರುಗಬೇಕು! ಭಾರತದಲ್ಲಿ ೧೦೦ಕ್ಕೆ ೯೦ರಂತೆ ಇರುವ ಅನಕ್ಷರಸ್ಥರಿಗೆ ಇಂಥವರೇ ಅಲ್ಲವೇ ಮುಂದಾಳಾಗಬೇಕು? ಆಚಾರ್‍ರೇ, ನಿಮ್ಮ ಬಾಯಿಂದ ಬಂದ ಮಾತು ಸರಿಯಾಗಿಯೇ ಇದೆ. ಶಾಸ್ತ್ರದ ಪಟದ ತೂಕ ವನ್ನು ಸಂಭಾಳಿಸಲಿಕ್ಕೆ ಬಾಲಾಗಸೆಯನ್ನು ಕಟ್ಟೋದು. ನೀವು ಕಟ್ಟೋ ಬಾಲಗಸೆ ಪಟವನ್ನು ಮೇಲೇರೋದಕ್ಕೇ ಕೊಡೋದಿಲ್ಲ. ಅಥವಾ, ಪಟ ವನ್ನು ಬಿಟ್ಟು ಬಾಲಗಸೆಯನ್ನಷ್ಟೇ ಮೇಲೇರಿಸಬೇಕೆನ್ನುವ ವಿಚಾರವನ್ನು ಹೇಳುತಾ ಇದ್ದೀರಿ. ನಿಮ್ಮ ಲೋಕಾಚಾರ! (ಉತ್ತೇಜಿತನಾಗಿ) ತತ್ತ್ವದ ತಿಳಿವಳಿಕೆ ಇಲ್ಲದ, ಮುಂದಾಗಬೇಕೆಂಬ ಮಹತ್ವಾಕಾಂಕ್ಷೆ ಇಲ್ಲದ ಲೋಕಾ ಚಾರ! ಕೆಸರಿನ ಕೊಳಚೆಯನ್ನೇ ಕಸ್ತೂರಿಯ ಕೊಳವೆಂದು ಕೇಕೆಹಾಕುವ ಲೋಕಾಚಾರ! ಹಾಲಿನ ಬದಲು ಹಿಟ್ಟಿನ ನೀರನ್ನೇ ಕಂಡು ಹಿಗ್ಗಿ ಹಾರಾ ಡುವ ಅಶ್ವತ್ಥಾಮನ ಬಾಲಿಶ ಬುದ್ಧಿಯ ಲೋಕಾಚಾರ...

ಶ್ರೀನಿವಾಸ : ಮಾಧೂ, ವಿತಂಡವಾದವನ್ನು ಬೆಳೆಸಬೇಡ. ತಲೆ ಮೇಲಿನ ಮಾಂಸವಾರಿಲ್ಲ ನಿನಗೆ; ಹಿರಿಯರಿಗೆ ಬುದ್ಧಿ ಹೇಳ್ಳಿಕ್ಕೆ ಹೊರಟೀ ಯೇನು? ನಮ್ಮ ಲೋಕಾಚಾರ ಅಂದರೆ ಕೆಸರಿನ ಕೊಳಚೆಯೇ ಅದು!

ಮೂರ್ಖನ್ನ ತಂದು! ಆಚಾರಃ ಪ್ರಥಮೋ ಧರ್ಮಃ—ಅಂತ ಆದ್ಯ ಶಂಕರಾಚಾರ್ಯರೇ ಎಚ್ಚರಿಕೆ ಕೊಟ್ಟಿದ್ದಾರೆ. ಹಂ! ತಿಳೀತಾ......

**ಮಾಧವ :** ಈ ಮಾತನ್ನು ನಾನೂ ಅಲ್ಲಗಳೆಯೋದಿಲ್ಲ. ಆಚಾರವೇ ಧರ್ಮ ಎಂದು ಆಚಾರ್ಯರು ಹೇಳಿದ್ದಾರೆ. ಆದರೆ ಆಚಾರ ಎಂದರೆ ಯಾವುದು, ಎಂಬುದು ಈ ಮಾತಿನಲ್ಲಿ ಸ್ಪಷ್ಟವಾಗಿಲ್ಲ. ಮಹಾನ್ ಅದ್ವೈತಿಗಳಾದ ಆಚಾರ್ಯರು, ಶ್ರೇಷ್ಠನಾದ ಪರಮಾತ್ಮ ಮತ್ತು ಮಾನವಪ್ರಾಣಿಯ ಕನಿಷ್ಠ ಜೀವಾತ್ಮ ಇವುಗಳಲ್ಲಿ ಐಕ್ಯವನ್ನು ಹೇಳಿದ್ದಾರೆ; ದೇವ ಮತ್ತು ಮಾನವರಲ್ಲಿ ಸಮರಸತೆಯನ್ನು ಸೂಚಿಸಿದ್ದಾರೆ. ಅಂತಹ ಮಹಾತ್ಮರು, ಮನುಷ್ಯ ಮನುಷ್ಯರೊಳಗೇ—ಈತ ಹಾರುವ ಆತ ಹೊಲೆಯ—ಎಂಬ ಭೇದವನ್ನು ಒಪ್ಪಲಾರರು. ಎಂದಮೇಲೆ, ಹರಿಜನರನ್ನು ಮುಟ್ಟಬೇಕು—ಎನ್ನುವದೇ ಆಚಾರ ಶಬ್ದದ ಅರ್ಥವಾಗಬಾರದೇಕೆ? ಏಕೆಂದರೆ, ಮಹಾಬ್ರಾಹ್ಮಣರಾದ ಆಚಾರ್ಯರಿಗೆ ಅವರ ಗುರುಗಳು ಚಾಂಡಾಲ ರೂಪದಲ್ಲಿಯೇ ದರ್ಶನಕೊಟ್ಟಿದ್ದರು—ಎಂಬ ಕತೆಯನ್ನು ಕೇಳಿರುವೆ.

**ಕಾಳಾಚಾರಿ :** (ಅಪಹಾಸ್ಯದಿಂದ) ಆ ಕತೆಯನ್ನು ಅವರೇ ನಿಮ್ಮ ಇದಿರಿಗೆ ಹೇಳಿದರೇನೋ!

**ಮಾಧವ :** (ಅಣಕದಿಂದ) ಆ ಕತೆಗೆ ನಿಮ್ಮದೇನಾದರೂ 'ಬಾಲಗಸೆ' ಅದೆ ಏನು?

( ಕಾಳಾಚಾರಿ ಮೋರೆ ತಿರುವಿ ಸುಮ್ಮನಾಗುವನು. )

**ಶ್ರೀನಿವಾಸ :** ಏ ಮಾಧೂ, ತಲೆಗಿಲೆ ಕೆಟ್ಟಿದೆಯೇನು ನಿನ್ನದು? ಆಚಾರ್ಯರ ಮಾತಿಗೆ ಅಪಾರ್ಥ ಮಾಡಿ, ನನ್ನ ಲೌಕಿಕ ಎಲ್ಲಾ ಕೆಡಿಸಬೇಕಂತೀಯಾ, ಹೊಲೆಯರನ್ನು ಹತ್ತರಕ್ಕ ಕರೆದು?

**ಮಾಧವ :** ( ಉದ್ವೇಗದಿಂದ ಮೈಮರೆತವನಂತೆ ) ಹೊಲೆಯರನ್ನು ಹತ್ತಿರ ಕರೆಯುವವನು ನಾನಷ್ಟೇ ಅಲ್ಲ; ಸಮಸ್ತ ಸಾಮಾಜಿಕರೂ ಸರ್ವ ಸನಾತನಿಗಳೂ ಎಲ್ಲರೂ ಹೊಲೆಯರನ್ನು ಹತ್ತಿರ ಕರೆಯಲೇಬೇಕಾಗುತ್ತದೆ; ಕರೆದೇ ಕರೆಯುತ್ತಾರೆ.

**ವಿರೂಪಾಕ್ಷಯ್ಯ** : ಏನು? ನಾವು ಹೊಲೆಯರನ್ನು ಹತ್ತಿರಕ್ಕೆ ಕರಿಯುತ್ತೇವೆಯೇ?

**ಮಾಧವ** : (ಅದೇ ಉದ್ವೇಗದಲ್ಲಿಯೇ) ಹೌದು, ಹೌದು, ಹೌದು! ನಿಮ್ಮ ಗುಡಿ ಗುಂಡಾರಗಳ ಅಂಗಳದ ಕಸ ತೆಗೆಯುವದಕ್ಕೆ ಹೊಲೆಯರು ಬೇಕು; ಮದುವೆ ಮುಂಜಿವೆ ಸಭಾ ಸಮಾರಂಭಗಳ ಸ್ಥಳವನ್ನು ಶುಚಿಯಾಗಿಡುವದಕ್ಕೆ ಹೊಲೆಯರು ಬೇಕು; ನಿಮ್ಮ ಮನೆ-ಮಠಗಳ ಮುಂದಿನ ಬೀದಿಯನ್ನು ಬಳಿದು ನಿಮ್ಮ ಆರೋಗ್ಯವನ್ನು ಕಾಯುವದಕ್ಕೆ ಹೊಲೆಯರು ಬೇಕು; ಭಾರತದ ಅನ್ನದಾತನಾದ ಒಕ್ಕಲಿಗನ ಬೇಸಾಯದ ಸಲಕರಣೆಗಳನ್ನು ಮಾಡಿಕೊಟ್ಟು, ಭಾರತೀಯರ ತುತ್ತಿನ ಚೀಲವನ್ನು ತುಂಬುವ ಕಾರ್ಯದಲ್ಲಿ ಹೊಲೆಯರು ಬೇಕು; ಕತ್ತಲು ಕಾವಳಗಳಲ್ಲಿ ಪ್ರಯಾಣ ಮಾಡುವ ಭೀದುಗಳ ಬೆಂಬಲಕ್ಕೆ ಹೊಲೆಯರು ಬೇಕು; ಶುಭಪ್ರಸಂಗಗಳಲ್ಲಿ ಶಹನಾಯಿ ಬಾರಿಸುವುದಕ್ಕೆ ಕೊಸಗ ಚಲವಾದಿ ಅಸ್ಪೃಶ್ಯರು ಬೇಕು; ಬುಟ್ಟಿ ಮೊರ ಚಾಪೆ ಚಿಬ್ಬಲು ಮುಂತಾಗಿ ಗೃಹಕೃತ್ಯದ ಉಪಕರಣಗಳನ್ನು ಮಾಡಲು ಘೋರ ಮೇದಾರ ಅಸ್ಪೃಶ್ಯರು ಬೇಕು. ಬಹಳವೇನು? ಹಿಂದುಗಳು ಹುಟ್ಟಿದಾಗ ಹಾಕುವ ತೊಟ್ಟಿಲದಿಂದ ಹಿಡಿದು, ಹಿಂದುಗಳ ಹೆಣವನ್ನು ಸಿದ್ದಿಗೆಯ ಮೇಲೆ ಸಾಗಿಸುವವರೆಗೂ ಅಸ್ಪೃರನ್ನು ಒಂದಿಲ್ಲೊಂದು ರೀತಿಯಿಂದ ಸಾಮಾಜಿಕರು ಕರೆಯಲೇ ಬೇಕಾಗುತ್ತದೆ; ಅವರಿಂದ ಸಹಾಯವನ್ನು ಪಡೆಯಲೇಬೇಕಾತ್ತಿದೆ! ಆದರೆ ಅವರ ಉಪಕಾರಕ್ಕೆ ಪ್ರತಿಯಾಗಿ, ದೀಕ್ಷಿತರೇ, ನೀವು ಕೊಡುವ ಪುರಸ್ಕಾರವೆಂದರೆ—'ಎಲೇ ಹೊಲೆಯಾ ಮುಟ್ಟಿಗಿಟ್ಟೀ, ದೂರಸರಿ.' ಅವರನ್ನು ಮುಟ್ಟಿದರೆ ಸವರ್ಣೀಯರ ಕುಲ-ಧರ್ಮಗಳು ಕೆಟ್ಟು ಹಳಸಿ ಹುಳಬಿದ್ದು ಹೊಲಸು ನಾರುತವೆಯೇನು?

**ಶಂಕರ** : ರಾಯರೇ, ನಿಮ್ಮ ಸಮಾಜಸತ್ತಾವಾದನಮಗೆ ಬೇಕಿಲ್ಲ, ಅಂದೆ.

**ಮಾಧವ** : ನಿಮ್ಮ ಸತ್ತ ಸಮಾಜವಾದ ಬೇಕೆಂದರೂ ಬದುಕೋ ಹಾಗಿಲ್ಲ, ಅಂದೆ.

**ವಿರೂಪಾಕ್ಷಯ್ಯ** : ಶ್ರೀನಿವಾಸರಾಯರೇ, ಸುಮ್ಮನೆ ಯಾಕೆ ಬೆಳೆಸಬೇಕು ಮಾತು? ನಾವಂತೂ ಹೇಳೋದನ್ನೆಲ್ಲ ನಿಮಗೆ ಹೇಳಿಬಿಟ್ಟೇವಿ.

ನಿಮ್ಮ ಮಕ್ಕಳಿಗೆ ಈಗಲೇ ತಿಳೀಲಿಕ್ಕಿಲ್ಲ; ಸ್ವಲ್ಪ ಸಮಾಧಾನ ಆದಮೇಲೆ ತಿಳಿಹೇಳಿರಿ; ಸ್ವಲ್ಪ ಅವರನ್ನು ಹಿಡಿತದೊಳಗೆ ಇಟ್ಟುಕೊಳ್ಳಿರಿ. ಇಲ್ಲಾ ಅಂದರೆ.. ?

**ಮಾಧವ :** ಇಲ್ಲಾ ಅಂದರೆ ಏನು ಮಾಡುತೀರಿ?

**ವಿರೂಪಾಕ್ಷಯ್ಯ :** ನಾವು ಜನಗಳಿಗೆ ಇದನ್ನೆಲ್ಲ ತಿಳಿಸಿ ಬಿಡತೇವಿ. ರಾಯರು ಬೆಳಗಾದರ M. L. A. ಆಗಲಿಕ್ಕೆ ನಿಲ್ಲೋವರಿದ್ದಾರs. ಜನ ಸಿಟ್ಟಾದರೆ...

**ಶಂಕರ :** ಜನರ ಮಾತು ಹಾಗಿರಲಿ. ನಾವು ಇದನ್ನು ಮಠದ ಸ್ವಾಮಿಗಳಿಗೂ ತಿಳಿಸಬೇಕಾಗತದ. ಇಂದಿಲ್ಲ ನಾಳೆ ಈ ಸಂಗತಿ ಶ್ರೀಗಳ ಕಿವಿಗೂ ಹೋಗಿಯೇ ತೀರತದೆ. ಆಗ ಮಹಾಸ್ವಾಮಿಗಳು—ಗೊತ್ತಿದ್ದ ಸಂಗತಿಯನ್ನು ಈ ಮೊದಲೇ ಏಕೆ ತಿಳಿಸಲಿಲ್ಲ ? —ಎಂದು ನಮ್ಮ ಮೇಲೂ ಬಹಿಷ್ಕಾರದ ಬ್ರಹ್ಮಾಸ್ತ್ರ ಬಿಡಬಾರದು.

**ಕಾಳಾಚಾರಿ :** ಪಂಚಾಯತಿಯ ಉಳಿದ ಮೆಂಬರರಿಗೂ ನಾವು ಎಚ್ಚರಿಕೆಯನ್ನು ಕೊಡಬೇಕಾದೀತು...... .

**ಮಾಧವ :** (ನಗುತ್ತ) ತ್ರಿಮೂರ್ತಿಗಳೇ, ಈ ಬಹಿಷ್ಕಾರ ಆವಿಷ್ಕಾರಗಳ ಬೆದರಿಕೆಯನ್ನು ಯಾರಿಗೆ ತೋರಿಸತೀರಿ ? ಬಹಿಷ್ಕಾರ ಅಂದರೆ, ಮನುಷ್ಯತ್ವದಿಂದಲೇ ದೂರದಲ್ಲಿ ಇಡತೀರೇನು ನಮ್ಮನ್ನು ?

**ಶ್ರೀನಿವಾಸ :** ಬಾಯ್ಮುಚ್ಚೋ ಮೂರ್ಖಾ! ಸಮಾಜ ಸಿಟ್ಟಾಯಿತು ಅಂದರೆ, ನಾವು ಊರೊಳಗೆ ಬಾಳೋದೇ ಬಿಗಿ ಆದೀತು.

**ಮಾಧವ :** ಅದು ಮತ್ತಿಷ್ಟು ಅನುಕೂಲ. ಆಮೇಲೆ, ಊರ್ಹೊರಗೆ-ಹರಿಜನ ಕೇರಿಯ ಹತ್ತಿರವೇ-ಇದ್ದುಬಿಟ್ಟರಾಯಿತು. ಇಂಥ ದೊಡ್ಡ ದೇಸಾಯರು ಹರಿಜನಕೇರಿಯಲ್ಲಿಯೇ ಮನೆ ಮಾಡಿದ್ದಾರೆ—ಅಂದರೆ, ಇನ್ನು ಹತ್ತು ವರ್ಷಗಳ ಮೇಲೆ ಆಗೋ ಹರಿಜನೋದ್ಧಾರ ಇಂದೇ ಆಗತದೆ. ಮಹಾತ್ಮಾಜಿ ಕಲಕತ್ತೆಗೆ ಹೋದಾಗ ಭಂಗಿ ಕಾಲನಿಯಲ್ಲಿಯೇ ವಾಸವಾಗಿರಲಿಲ್ಲವೇ ? ಅನಾಯಾಸವಾಗಿಯೇ ಹರಿಜನೋದ್ಧಾರ ಮಾಡಿದ ನಿಮಗೆ...... .

**ಶ್ರೀನಿವಾಸ** : ಅಂತೂ ಆ ಹೊಲೆಯರ ಉದ್ಧಾರ ಮಾಡೋದ ರೊಳಗೇ ನಮ್ಮ ಮನೆತನದ್ದೂ ಉದ್ಧಾರ ಮಾಡಬೇಕೆಂತೀಯೇನು ? ನಮ್ಮ ದೇವರು-ಧರ್ಮ-ಆಚಾರ-ವಿಚಾರ ಎಲ್ಲ ನಿನಗೆ ಹುಡುಗಾಟಿಕೆ ಅನಿಸೇದಲ್ಲ ? ಅವಿವೇಕನ್ನ ತಂದು. ತಂದೆಗೆ ತಿರುಗಿ ಬೀಳೋಮಗ ಇದ್ದರೇನು, ಸತ್ತರೇನು ?...

**ರಮಾದೇವಿ** : (ಒಳಗಿನಿಂದ ಧಾವಿಸಿಬಂದು ಗಂಡನನ್ನು ಕುರಿತು). ಏನದು, ಬಾಯಿಗೆ ಬಂದಂತೆ ಮಾತಾಡೋದು ನನ್ನ ಕಂದಮ್ಮನಿಗೆ ? ಯಾರ್ಯಾರದೋ ಮಾತು ಕೇಳಿ...

**ಶ್ರೀನಿವಾಸ** : ಯಾರ್ಯಾರದೋ ಮಾತು, ಅಂತೆ! ಮಂದಿ ಮಾತು ಕೇಳೋವನಲ್ಲ ನಾನು. ನನ್ನಿದಿರಿಗೇ ಮಾತಾಡತಾನೆ ನಿನ್ನಮಗ—ಹೊಲೆ ಗೇರಿಯೊಳಗೇ ಮನೆ ಮಾಡೋಣ—ಅಂತ. ಅಂದಮೇಲೆ ಇಂಥಾವ ಸತ್...

**ರಮಾದೇವಿ** : ನಾಕು, ಬಾಯಿ ಮುಚ್ಚಿರಿ. ( ಮಗನ ಹತ್ತರ ಬಂದು ಮೈಮೇಲೆ ಕೈಯಾಡಿಸುತ್ತ ) ಹಿರಿಯರ ಅಪ್ಪಣೆಯನ್ನು ಮೀರಬಾರ ದಪ್ಪ. ಸುಮ್ಮ-ಸುಮ್ಮನೆ ಅವರ ಮನಸ್ಸು ಯಾಕೆ ನೋಯಿಸತೀ? ಅವರು ಹೇಳಿದಂತೆ ಕೇಳಿದರಾಯಿತು. ( ಮತ್ತೆ ಮೈಮೇಲೆ ಕೈಯಾಡಿಸುವಳು. )

**ಮಾಧವ** : ( ಮಾತೃಪ್ರೇಮದಿಂದ ) ನಾನು ಯಾರ ಮನಸ್ಸನ್ನೂ ನೋಯಿಸುತ್ತಿಲ್ಲ ಅವ್ವಾ. ನನ್ನ ತಂದೆ, ತಂದೆಯ-ತಂದೆ, ಅಖಿಲಭಾರತಕ್ಕೇ ತಂದೆಯಾದ ಮಹಾತ್ಮಾ ಗಾಂಧಿ ಅವರ ಅಪ್ಪಣೆಯಂತೆ ನಡೆದರೆ, ಹಿರಿಯರ ಮಾತನ್ನು ಮೀರಿದಂತಾಯಿತೇ ತಾಯಿ ?

**ವಿರೂಪಾಕ್ಷ** : ರಾಯರೇ, ತಂದೆಯ ಆಜ್ಞೆ ಅಂದರೆ ಏನಂತ ತಿಳಿ ದೀರಿ? ತಂದೆಯ ಪ್ರತಿಜ್ಞಾ ಪಾಲನಕ್ಕಾಗಿ ಪ್ರಭು ರಾಮಚಂದ್ರ ಸಾಮ್ರಾಜ್ಯದ ಸಿಂಹಾಸನವನ್ನು ಬಿಟ್ಟು ಕಲ್ಲು-ಮುಳ್ಳು ತುಳಿಯುತ್ತ ಕಾಡಿಗೆ ಹೋದ, ಅಲ್ಲಿಯೇ ೧೪ ವರ್ಷ ಕಾಲವನ್ನು ಕಳೆದ. ತಂದೆಯ ಮಾತು ಮೀರಿದರೆ ನರಕ ತಪ್ಪಿದ್ದಲ್ಲ.

**ಮಾಧವ** : ಮತ್ತೆ, ತಂದೆಯ ಮಾತು ಮೀರಿದ ಪ್ರಹ್ಲಾದನಿಗೆ ಶ್ರೀ ವಿಷ್ಣು ಯಾಕೆ ಬೆಂಬಲಕ್ಕೆ ಬಂದನೋ! ಅಯ್ಯನೋರೇ, ನನ್ನ ದೃಢ

ಪಾಪ ಪ್ರತಿಜ್ಞೆ ಇದು: ದೀನ-ದಲಿತರ ಸೇವೆ ಮಾಡುವುದು ಪಾಪ ಎಂದು ಯಾರೇ ಹೇಳಿದರೂ ನಾನು ಅದನ್ನು ಬಿಡೋದಿಲ್ಲ. ಮತ್ತೆ-ಮತ್ತೆ ಅದೇ ಪಾಪವನ್ನೇ ಮಾಡುತೇನೆ; ಅದರಿಂದ ನರಕದ ಶಿಕ್ಷಾ ದೊರೆಯುತ್ತಿದ್ದರೆ ಅದನ್ನೇ ಸ್ವರ್ಗದ ಸೌಖ್ಯ ಅಂತ ಅನುಭವಿಸುತೇನೆ.

**ಶ್ರೀನಿವಾಸ :** ( ಮಿತಿಮೀರಿ ಕೋಪದಿಂದ ) ನರಕ—ಸ್ವರ್ಗ, ಸ್ವರ್ಗ—ನರಕ!—ನೀರು ಕುಡಿದ್ಹಾಂಗ ಮಾತಾಡತೀಯಲ್ಲ? ಮೈ ಬೆವರು ಸುರಿಸವೆ ತಿನ್ನಲಿಕ್ಕೆ ಹೊತ್ತು-ಹೊತ್ತಿಗೆ ಸಿಗತದೆ ಅಂತ ಸೊಕ್ಕಿನ ಮಾತು ಬರತವೆ ಇವೆಲ್ಲ. ಸತ್ತಮ್ಯಾಲಿನ ನರಕದ ಶಿಕ್ಷಾದ ಮಾತು ಇರಲಿ; ಒದ್ದು ಮನೇ ಬಿಡಿಸಿ ಹೊರಗೆ ದೂಡಿದೆ ಅಂದರೆ—ಕೂಳಿಲ್ಲದೆ ವಕ-ವಕ ಬಾಯಿ ಬಿಡುತಾ ತಿರುಗಾಡೋ ಮುಂದೆss, ಜೀವಿರತಾನೇ ನರಕದ ಕಲ್ಪನಾ ಬರತ್ವದ; ತಿಳೀತೇನು ?

**ಶಂಕರ :** (ಹಿತವಂತನಂತೆ) ಹಾಗ ಸಿಟ್ಟಿಗೇಳಬೇಡಿರಿ ರಾಯರೇ! ಪಾಪ! ಹುಡುಗ ಬುದ್ಧಿss! ಅನುಭವ ಸಾಲದುs! ನೀವೂ ಅವನಂತೇ ಹೋದರೆ ಹೇಗೆ? ಮಾಧವರಾಯರೇ, ಈಗಿನ ದಿವಸದೊಳಗೆ ಹೊಟ್ಟೀ ತುಂಬಿಕೊಳ್ಳೋದು ಎಷ್ಟು ಕಷ್ಟ ಅನ್ನೋದರ ಅರಿವಿಲ್ಲ ನಿಮಗೆ! ಹೊಟ್ಟಿಗೆ ಅನ್ನ ಇಲ್ಲ ಅಂದರೆ...

**ಸೀತಕ್ಕ :** ದೀಕ್ಷಿತರೇ, ಮಾತೆತ್ತಿದರೆ ಹರಿ ಹರಿ ಅಂತೀರಿ; ಇಂಥ ವರು ಆ ಹರಿಯ ಮೇಲೆ ನಂಬಿಗೆ ಇಲ್ಲದೆ ಮಾತಾಡೋದು ಮಹಾ ಆಶ್ಚರ್ಯ! ಈ ಜಗತ್ತನ್ನು ಹುಟ್ಟಿಸಿದ ದೇವರಿಗೆ ಅದನ್ನು ಹೊರೆಯೋ ಹೊಣೆಗಾರಿಕೆಯೂ ಇದೆ ದೀಕ್ಷಿತರೇ!

**ಶ್ರೀನಿವಾಸ :** (ಅಣಕಿಸುತ್ತ) ಆ ಹಾ ಹಾ ಹಾ! ಗಂಡನಿಗೆ ತಕ್ಕ ಹೆಂಡಿತಿ! ಜೋಕೆ! ರಾಮುನ ಸಂಗಡ ಸೀತೆ ವನವಾಸಕ್ಕೆ ಹೋದಂತೆ, ನೀನೂ ಮನೆಬಿಟ್ಟು ಹೋಗಬೇಕಾದೀತು, ಮಾಧೂನ ಸಂಗಡ.

**ರಮಾದೇವಿ :** (ಕೆರಳಿ) ರಾಮು - ಸೀತೆ ಹೋದಮೇಲೆ ದಶರಥ ನಿಗಾದ ಗತಿss

**ಮಾಧವ :** (ಒಮ್ಮೆಲೆ ತಾಯಿಯ ಬಾಯ ಮೇಲೆ ಕೈಯಿಟ್ಟು) ಮಂಗಲದೇವತೆಯ ಮುಖದಿಂದ ಶಾಪದ ಶಬ್ದಗಳು ಹೊರಡಬಾರದು ಅವ್ವಾ! ಚಂದ್ರಬಿಂಬದಿಂದ ಅಮೃತಕಿರಣಗಳಲ್ಲದೆ, ವಿಷ ಬಿಂದುಗಳು ಬೀಳಬಾರದವ್ವಾ. ತ್ರೇತಾಯುಗದ ರಾಮಾಯಣ ಕಲಿಯುಗದಲ್ಲಿ ತಲೆ ಕೆಳಕಾಗಲಿ; ದಶರಥನ ಬದಲು ರಾಮನಿಗೇ ನಾವು ಸಿದ್ಧವಾಗಲಿ!

**ರಮಾದೇವಿ :** (ಎಚ್ಚೆತ್ತು) ಅಭದ್ರವನ್ನು ಆಡಬೇಡ ಮಗೂ! ಪ್ರಹ್ಲಾದ ಮಾರ್ಕಂಡೇಯರಂತೆ ಚಿರಂಜೀವಿಯಾಗು! (ಗಂಡನಿಗೆ) ಇನ್ನೂ ನಿಮ್ಮ ಕಲ್ಲೆದೆಯಲ್ಲಿ ಕರುಣೆಯ ನೆಲೆ ಒಡೆಯಲಿಲ್ಲವೇ? ಏನದು ಮಗ ಮಾಡಿರೋ ತಪ್ಪು?

**ಶ್ರೀನಿವಾಸ :** ದಿನಾ ಹೊಲೆಗೇರಿ ಹೊಗೋದು, ಮಾದಿಗರನ್ನು ಮುಟ್ಟೋದು, ಮೇಲಿನ ಜಾತಿಯವರ ಮನೆಯೊಳಗೆ ಮತ್ತು ಗುಡಿಗುಂಡಾರ ಗಳೊಳಗೆ ಪ್ರವೇಶ ಮಾಡಿರಿ ಅಂತ ಅವರನ್ನು ಹುರಿದುಂಬಿಸೋದು, ಕೆರೆ ಬಾವಿಗಳಲ್ಲಿ ಅವರಿಂದ ನೀರನ್ನು ತುಂಬಿಸೋದು–ಇವೆಲ್ಲ ತಪ್ಪಲ್ಲೇನು?

**ಸೀತಕ್ಕ :** ಮಾವನವರೇ, ಈ ಮಾತನ್ನು ಭಾರತ ಸರಕಾರವೇ ಹೇಳುತದೆ. ಈ ಹೇಳಿಕೆಯನ್ನು ಸರಕಾರದ ಸಂಸ್ಥೆಗಳು–ನಿಮ್ಮ ಪಂಚಾ-ಯತಿ ಮೊದಲಾದುವು-ಬಳಕೆಯಲ್ಲಿ ತರೋದು ಅವಶ್ಯ ಕರ್ತವ್ಯ. ನಿಮ್ಮ ಕರ್ತವ್ಯವನ್ನು (ಗಂಡನನ್ನು ತೋರಿಸುತ್ತ) ಇವರು ಆತ್ಮ ಸಂತೋಷದಿಂದ ಮಾಡುತಿರೋದು ತಪ್ಪಾಗಲಿಕ್ಕಿಲ್ಲ; ಒಪ್ಪಾದೀತು.

**ಶ್ರೀನಿವಾಸ :** ( ಅಣಕದ ದನಿಯಲ್ಲಿ ) ಹಾಹಾಹಾ! ಒಂಟಿಯ ಮದುವೇ ಮುಗಿಸೋದಕ್ಕೆ ಕತ್ತೆ ಮಂತ್ರ ಹೇಳಿದ ಹಾಗಾಯ್ತು. ಬಹಳ ಎಚ್ಚರಿಕೆ! ಮತ್ತೊಮ್ಮೆ ಬಾಯಿಬಿಟ್ಟೆ ಅಂದರೆ, ಮಾಧೂನ ಜೊತೆಗೆ ನೀನೂ ಮನೆ ಬಿಟ್ಟು ಹೊರಡಬೇಕಾದೀತು.

**ಸೀತಕ್ಕ :** ಪತಿ ಇದ್ದಲ್ಲಿ ಪತ್ನಿ ಇರಬೇಕಾದದ್ದು ತಮ್ಮಂಥ ಹಿರಿಯರು ಹೇಳಿದ ಧರ್ಮ.

**ಶಂಕರ :** ನೋಡಿದಿರಾ; ಎಷ್ಟಾದರೂ ಸದ್ಗೃಹಸ್ಥರ ಮಗಳು, ಸನಾತನ ಸಂಪ್ರದಾಯದವರ ಸೊಸೆ; ಎಂದಮೇಲೆ, ಸನಾತನ ಧರ್ಮದಲ್ಲಿ

ನಂಬಿಗೆ ಹೇಗೆ ಹೋದೀತು ಹೇಳಿರಿ ! ಸೀತಕ್ಕನ ನಿನ್ನ ಪ... ...ವರಿಗೆ ಹೇಳ ಬೇಕು-ನಿನ್ನಂತೆ ಸನಾತನ ಧರ್ಮದಲ್ಲಿ ವಿಶ್ವಾಸವಿಡೋದಕ್ಕೆ.

ಸೀತಕ್ಕ ಅವರು ಇಟ್ಟಿದ್ದಾರೆ ದೀಕ್ಷಿತರೇ. ಏಕವರ್ಣದ ವೇದಕಾಲ ದೊಳಗೆ, ಚಾತುರ್ವರ್ಣ್ಯದ ದ್ವಾಪರ ಯುಗದೊಳಗೆ ಮುಟ್ಟಬಾರದವರು ಅಂತ ಅಯ್ದನೆಯವರ್ಣ ಇರಲೇ ಇಲ್ಲ. ಆಗ ಎಲ್ಲರೂ ಒಬ್ಬರನ್ನೊಬ್ಬರು ಮುಟ್ಟುತ್ತಿದ್ದರು. ಕೂಡಿಕೊಂಡು ಊಟ ಮಾಡುತ್ತಿದ್ದರು. ಅದನ್ನೇ ಈಗಲೂ ಮಾಡಬೇಕು, ಅಂತ ಇವರು ಹೇಳೋದು, ಸನಾತನ ಧರ್ಮವೇ ಅಲ್ಲವೇ?

ವಿರೂಪಾಕ್ಷಯ್ಯ : ದೀಕ್ಷಿತರೇ, ಸುಮ್ಮನೆ ... ...ಡಕೋತೀರಿ. ಹೇಳೋದನ್ನು ಹೇಳಿದ್ದಾಯ್ತು. ರಾಯರಿದ್ದಾರೆ, ... ಮಗ ಸೊಸೆ ಇದ್ದಾರೆ. ಏನು ಬೇಕಾದ್ದನ್ನು ಮಾಡಿಕೊಳ್ಳಲಿ. ನವ... ...ಚ್ಚರದೊಳಗೆ ನಾವು ಇರೋಣ. ನಡೀರಿನ್ನು (ತ್ರಿಮೂರ್ತಿಗಳು ಹೆ... ...ವಂತೆ ನಟಿಸುವರು.)

ಶ್ರೀನಿವಾಸ : ಹಾಂ, ಹೋಗಕೂಡದು. ನಿಮ... ...ರಿಗೇ ಎಲ್ಲಾ ಮುಗೀಲಿಕ್ಕೆ ಬೇಕು. ಮಾಧೂ ಲಕ್ಷ್ಯಕೊಟ್ಟು ಕೇ... ...ನ್ನ ಲೌಕಿಕ ಮಹತ್ವಾಕಾಂಕ್ಷೆಗಳು ಕೈಗೂಡಬೇಕಾದರೆ, ನೀನು ... ...ರ ಗೊಡವೇ ಬಿಟ್ಟು, ಸನಾತನ ಧರ್ಮಾಚಾರದಂತೆ ನಡೆಯುತ್ತ ಮನೆ... ಇರಬೇಕು; ನಿನ್ನ ಹಟವನ್ನೇ ನಡೆಸೋದಾದರೆ, ನಿಂತಕಾಲ ಮೆ... ...ಮನೆ ಬಿಟ್ಟು ಹೊರಬೀಳಬೇಕು.

ರಮಾದೇವಿ : ಇದ್ದೊಬ್ಬ ಮಗನನ್ನ ಹೊರಗೆ ಹ... ...ರೆ, ಆಮೇಲೆ ಡೊಂಬರ ಕತ್ತೆ-ಡೊಂಬರ ಕತ್ತೆಗಳು ದೊ... ಹೊಡತವೆ ಈ ಮನೆಯೊಳಗ.

ಶ್ರೀನಿವಾಸ : ಅದನ್ನು ನೋಡೋದಾಗದಿದ್ದ... ...ಯೂ ಅವನ ಸಂಗಡ ಮನೆಬಿಟ್ಟು ಹೋಗಿಬಿಡು.

ಮಾಧವ : ಅವ್ವಾ, ಅವ್ವಾ, ಹೊತ್ತು ಹೆತ್ತ... ...ರಿಗೆ ನನ್ನನ್ನು ಹೊರೆಯುವದಕ್ಕಾಗಿ ನೀನು ಕಷ್ಟಪಟ್ಟದ್ದೇ ಸಾಕು ... ಸಲುವಾಗಿ

ಮುಂದೆಯೂ ನಿನಗೆ ಕಷ್ಟವಾಗುವದುಬೇಡ ತಾಯಿ. ಅಪ್ಪಾಜಿಯ ಅಭಿಪ್ರಾಯ ಹೇಗೂ ಇರಲಿ; ಅವರ ಯೋಗಕ್ಷೇಮವನ್ನು ನೋಡಿಕೊಳ್ಳಲು ನೀನು ಮನೆಯಲ್ಲಿರಲೇಬೇಕು. ನಿನ್ನ ಮಾತೃಪ್ರೇಮದ ಕವಚ ನನ್ನ ಮೇಲಿರುವವರೆಗೆ ನಾನು ಎಲ್ಲಿದ್ದರೂ ಸುಖವಾಗಿರುವೆ.

**ಶ್ರೀನಿವಾಸ :** ಇರದೇನು ಮಾಡೀ, ಅನಾಯಾಸವಾಗಿ ಆಸ್ತಿಯ ಬೆಂಬಲ ಅದೆ ಅಂದಾಗ! ಆದರೆ ನೆನಪಿಡು; ಒಮ್ಮೆ ಮನೆ ಬಿಟ್ಟು ಹೋದ್ಯ ಅಂದರೆ, ತಿರುಗಿ ಕಾಲು ಹಾಕಗೊಡಲಿಕ್ಕಿಲ್ಲ ಈ ಮನೆಯೊಳಗೆ. ಆಸ್ತಿ ಆಶಾ ಬಿಟ್ಟು ಬಿಡಬೇಕಾದೀತು.

**ಮಾಧವ :** ಆಸ್ತಿ, ಆಸ್ತಿ! ದೀನದರಿದ್ರರ ಹೆಣಗಳ ಬುನಾದಿಯ ಮೇಲೆ ಮುಗಿಲೆತ್ತರ ಬೆಳೆದ ಆಸ್ತಿ! ಮೈಬೆವರಿನಿಂದ ಮಣ್ಣನ್ನು ತೋಯಿಸಿದರೂ ಕೂಳಿಲ್ಲದೆ ಕಂಗಾಲಾಗಿರುವ ಕೋಟಿಗಟ್ಟಲೆ ಬಡವರು ಬೀದಿಯಲ್ಲಿ ಬಿದ್ದು ಸಾಯುತ್ತಿರುವಾಗ, ಮಣಿಯಿಂದ ಮಂಚಕ್ಕೆ-ಮಂಚದಿಂದ ಮಣಿಗೆ ಅಡ್ಡಾಡುವವರಿಗೆ ತಿಂದರೂ ತೀರಲಾರದಷ್ಟು ಆಸ್ತಿ! ಇಂಥ ಅನ್ಯಾಯದ ಆಸ್ತಿಯ ಆಶೆಯಿಲ್ಲ ನನಗೆ ಅಪ್ಪಾಜಿ! ನನಗಿಲ್ಲದ ಮೇಲೆ ಅದು ಸಾರ್ವಜನಿಕರ ಸೊತ್ತಾಗಬೇಕಷ್ಟೇ. ನನಗೇ ಆಸ್ತಿ ಸಿಕ್ಕಿದ್ದರೂ ಅದನ್ನು ಹರಿಜನರಿಗೆ ಹಂಚಿಬಿಡುತ್ತಿದ್ದೆ! ನಾನು ಬಿಟ್ಟು ಹೋಗೋದರಿಂದ ಹೇಗೂ ಸಾರ್ವಜನಿಕರ ಹಿತವಾಗುವಂತಿದ್ದರೆ, ಈಗಲೇ ಹೊರಟೆ. ಆಶೀರ್ವಾದ ಮಾಡಿರಿ. ( ಎಂದು ತಂದೆಯ ಪಾದದ ಹತ್ತಿರ ಶಿರಬಾಗಿ ಕುಳಿತುಕೊಳ್ಳುವನು. )

**ಶ್ರೀನಿವಾಸ :** ತೆಗೆದುಕೊ ಆಶೀರ್ವಾದವನ್ನು. ( ಬಲವಾಗಿ ಒದೆಯುವನು. ಮಾಧವ ಹಿಂದಕ್ಕೆ ಬೀಳುವನು. )

**ರಮಾದೇವಿ :** ಅಯ್ಯೋ ಕೊಂದಿರಿ ನನ್ನ ಮಗನನ್ನು! ( ಎಂದು ಧಾವಿಸಿ ಬಂದು ಮಗನನ್ನು ಅಪ್ಪಿಗೊಂಡು ಅಳುತ್ತ ) ಪೆಟ್ಟಾಯಿತೇ ಅಪ್ಪಾಜಿ! ಯಾಕೆ ಹುಟ್ಟಿದಿ ಈ ಚಂಡಾಲಿನೀ ಹೊಟ್ಟೆಯೊಳಗೆ! ಒಬ್ಬ ಬಡವರ ಮನೆಯೊಳಗೆ ಹುಟ್ಟಿದ್ದರೆ ಎಷ್ಟು ಪ್ರೀತಿಯಿಂದ ಕಾಪಾಡುತ್ತಿದ್ದರೋ, ಎಷ್ಟು ಮುದ್ದಿಡುತ್ತಿದ್ದರೋ! ಹೊಟ್ಟೆಯ ಮಗನಮೇಲೆ ಮಮತೆ ಇಲ್ಲದವರು ಸನಾತನ ಧರ್ಮದ ಉದ್ಧಾರಮಾಡುತಾರೆ ಇವರು ..!

**ಶ್ರೀನಿವಾಸ :** ತಂದೆಯ ಪರವೆ ಇಲ್ಲದವ ಮಂದಿಯ ಉದ್ಧಾರ ಮಾಡುತಾನೆ.

**ರಮಾದೇವಿ :** ಮಾತೆತ್ತಿದರೆ ದೇವರು-ಧರ್ಮ ಅಂತೀರಿ; ಕಾರಣ ಇಲ್ಲದೆ ಮೂಗಿನ ತುದೀಮೇಲೇ ಸಿಟ್ಟು ಇಟ್ಟುಗೊಂಡಿರತೀರಿ.

ಶಂಕರ : ಏನ್ರೀ ರಮಾದೇವೀ, ನಮ್ಮ ಸನಾತನ ಧರ್ಮದೊಳಗೆ ಪತಿ ದೇವರಿಗೆ ಹೀಗೆ ತಿರಸ್ಕಾರದ ಮಾತು ಆಡಬಾರದು ಅಂತ !

ಸೀತಕ್ಕ : ದೀಕ್ಷಿತರೇ, ನಿಮ್ಮ ಸತ್ನಾತನ ಧರ್ಮದೊಳಗೆ ಗಂಡ-ಹೆಂಡಿರನ್ನೂ ಅಗಲಿಸಬೇಕು ಅಂತ ಹೇಳೇದೇನು ? ತಂದೆ-ಮಕ್ಕಳನ್ನು ಅಗಲಿಸಿದ್ದು ಸಾಕಾಗಲಿಲ್ಲೇನೋ ಅಲ್ಲವೇ ನಿಮಗೆ? ಅತ್ತೆಯವರೆ, ನಾವು ನಿಂತ ಹಾಗೆಲ್ಲ ನಿಮ್ಮ ಮೇಲೆಯೂ ಸಂಕಟ ಬರೋದು ತಪ್ಪಿದ್ದಲ್ಲ. ಆಶೀರ್ವಾದ ಮಾಡಿರಿ; ನಾವಿನ್ನು . ( ತಲೆಬಾಗಿಸಿ ನಿಲ್ಲುವಳು. )

**ರಮಾದೇವಿ :** ( ಸೊಸೆಯನ್ನು ಅಪ್ಪಿಕೊಂಡು ಅಳುತ್ತ ) ಸೀತಾ, ಸೀತಾ, ಮಗಳೇ, ನೀನೂ ಹೋಗಬೇಕಂತಿಯಾ, ಈ ಒಡಕು ಹಣೇ ಬರಹದವಳನ್ನು ಬಿಟ್ಟು! (ಮೈಮೇಲೆ ಕೈಯಾಡಿಸುತ್ತ) ಮಗಳೇ, ಸೀತಾ (ಅಳುವಳು.)

**ಮಾಧವ :** ಅವ್ವಾ, ನೀನೇಕೆ ಅಳುವೆ? ನಾವೆಲ್ಲಿ ದೂರ ಹೋಗುತೇವೆ? ಇಲ್ಲೇ, ಹರಿಜನ ಕೇರಿಯ ಹತ್ತಿರವೇ ನಮ್ಮ ವಾಸ. ಅದೇನೂ ದೂರವಿಲ್ಲ. ಅಲ್ಲಿ ನಮ್ಮ ಬಳಗವೂ ದೊಡ್ಡದದೆ. ನೀನೇನೂ ಚಿಂತಿಸಬೇಡಮ್ಮs. ನಿತ್ಯವೂ ನಿನ್ನನ್ನು ಕಾಣುವೆ. ಬರುವೆ ತಾಯೀ, ನಮಸ್ಕಾರ. (ತಾಯಿಗೆ ನಮಸ್ಕಾರ ಮಾಡುವನು.)

**ರಮಾದೇವಿ :** ( ಮಗನನ್ನು ಎತ್ತಿ ಅಪ್ಪಿಕೊಂಡು ) ಮಾ...ಧೂ, ಮಾ...ಧೂ, ಹೊಟ್ಟೆಯಲ್ಲಿ ಅಗುಳು ಅನ್ನವಿಲ್ಲ, ಬೆಳಗಿನಿಂದಲೂ ನಿನಗೆ ! ಉಪವಾಸವೇ ಮನೆ ಬಿಟ್ಟು ಹೋಗತೀಯಾ ಅಪ್ಪಾsss! (ಮತ್ತಿಷ್ಟು ಅಳುತ್ತ) ಅಯ್ಯೋ, ಹಾಸಿಗೆ ಹೊದಿಕೆ......ಚಳಿ..........ಮಳೆ.......... ಅಯ್ಯೋ (ಎಂದು ಗಟ್ಟಿಯಾಗಿಯೇ ಅಳುವಳು.)

**ಸೀತಕ್ಕ** : ಅತ್ತೆಯವರೇ, ನಿಮ್ಮ ಆಶೀರ್ವಾದದಿಂದ ನಮಗೇನೂ ಕೊರತೆಯಿಲ್ಲ. ನಿಮ್ಮ ಹರಕೆ ಇದ್ದರೆ ಸಾಕು. ಹರಸಿ ಕಳಿಸಿರಿ.

**ರಮಾದೇವಿ** : ( ಸೊಸೆಯನ್ನು ಮೈದಡವುತ್ತ ) ಮನೆಯ ಮಹಾ ಲಕ್ಷ್ಮೀ, ಇಂದಿಗೇ ಎರವಾಗುತೀಯಾ ತಾಯೀ ಈ ಹತಭಾಗ್ಯಳಿಗೆ.... (ಅಳುವಳು.)

**ಸೀತಕ್ಕ** : (ಅತ್ತೆಯನ್ನು ಸಂತಯಿಸುತ್ತ) ಅಳಬೇಡಿರಿ ಅತ್ತೆಯವರೇ; ನಿಮ್ಮ ಕಣ್ಣೀರಿನ ಕಾಲುವೆಯನ್ನು ದಾಟೋದು ನಮಗೆ ಜಡವಾದೀತು. ನಗುನಗುತ್ತ ಬೀಳ್ಕೊಡಿರಿ. (ನಮಸ್ಕರಿಸುವಳು.)

**ಮಾಧವ** : ನಡೆ ಸೀತೇ ಹೋಗೋಣ. ತಡಮಾಡಿದರೆ ತಂದೆ ಯವರಿಗೆ ಅಸಮಾಧಾನವಾದೀತು. ಬರುತ್ತೇನೆ ಅಪ್ಪಾಜೀ, ಅಮ್ಮಾss (ಹೊರಡುವರು)

**ರಮಾದೇವಿ** : (ಕೈಯೆತ್ತಿ) ಅಯ್ಯೋ, ಅಯ್ಯೋ! ಉಟ್ಟ ಅರಿವೆ ಯಿಂದಲೇ ಹೊರಬಿದ್ದರಲ್ಲ ನನ್ನ ಕಂದಮ್ಮಗಳುss! (ಅವರನ್ನೇ ತುಸು ಹಿಂಬಾಲಿಸುತ್ತ) ಮಾಧೂ—ಸೀತೇ—ಸೀತೇ—ಮಾಧು (ಎಂದು ದೊಪ್ಪನೆ ಬೀಳುವಳು)

ತೆರೆ,

೩ನೆಯ ಅಂಕ ಮುಗಿದುದು



# ೪ನೆಯ ಅಂಕ

## ಪ್ರವೇಶ ೧

**ಸನ್ನಿವೇಶ :** ( ಜಂಗಲ್ ರಸ್ತಾ ವರದೆಯ ಮುಂದೆ. ) ಸಂಧ್ಯಾ ಸಮಯ. ಊರ ಹೊರಬಯಲಿನ ಪ್ರಶಸ್ತ ಬಯಲು ಪ್ರದೇಶದಲ್ಲಿ ಲಕ್ಷ್ಮಿ ಒಬ್ಬಳೇ ಬರುತ್ತಾಳೆ; ಕೈಯಲ್ಲಿಯ ಕಾಗದವನ್ನು ನೋಡುತ್ತಿದ್ದಾಳೆ.

**ಲಕ್ಷ್ಮೀ :** ( ಕಾಗದವನ್ನು ನೋಡುತ್ತಲೇ ಕೆಮ್ಮಿ ಕೇಕರಿಸಿ )
ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ.......

(ಪದ್ಯವನ್ನು ಅಪಸ್ವರದಲ್ಲಿ ಹಾಡುವಳು)

(ನಿರಾಶೆಯ ದನಿಯಲ್ಲಿ) ಇನ್ನೇನು ಮಾಡಲಿ‌ಃ ಅಂತೇನಿ. ಈ ಹೊತ್ತು ಸಂಜೆಯ ಪ್ರಾರ್ಥನಾಕ್ಕಃ ನಾನು ಈ ಪದಃ ಹೇಳಬೇಕೆಂತೆ; ಮಾಧೂರಾಯರು ಅದನ್ನ ಬಿಡಿಸಿ ಹೇಳತಾರೆಂತೆ. ಸಣ್ಣಾಕಿದ್ದಾಗ ನಾಲ್ಕು ಅಕ್ಷರ ಕಲಿತದ್ದು ಯಾವದೋ ಜನ್ಮದ ಕನಸಾಗೇತಿ. ನೆಟ್ಟಗ ಓದಾಕ ಬರೂದಿಲ್ಲ; ಇದಾ ಇನ್ನೇನು ಹಾಡುತೀನಿ ಮಣ್ಣು !

(ಮತ್ತೆ) ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ. (ಬೇಸೂರಿನಲ್ಲಿ ಹಾಡುವಳು.) ಥೂಥೂ! ಇದನ್ನು ಕೇಳಿದರೆ ಕತ್ತೆ ಕೂಡ ಹಿಂಗಾಲು ಹಾರಿಸಿ ಹೋದೀತು ! ಹನುಮಂತಪ್ಪ ಎಷ್ಟು ಚೆಂದ ಹಾಡಿ ತೋರಿಸಿದರು ಈ ಪದವನ್ನ. ಆಗ ಬಂದ್ಹಾಂಗಾತು. ಈಗ ನೋಡಿದರೆ....? ಮತ್ತೊಮ್ಮೆ ಅವರನ್ನೇ ಕೇಳಬೇಕು. ಆದರೆ ತುದಿ ನಾಲಗೆ ಮ್ಯಾಲಿಂದು ತುಟಿ ಹೊರಗ ಬಂತಂದರ ಏನೋ ಎಂತೋ! ಒಮ್ಮೊಮ್ಮೆ... ನನ್ನ ಮನಸಿನ್ಯಾಗ ಇದ್ದದ್ದಃ ಅವರ ಮನಸಿನ್ಯಾಗೂ ಇದ್ದೀತೇನೋ ಅನಿಸತೈತಿ. ಮತ್ತೊಮ್ಮೆ, ನನ್ನಂತಾ ಕಲೀದಿದ್ದ ಹೆಂಗಸನ್ನ ಅವರ್‍ಯಾಕ ಕೈಹಿಡಿದಾರುಃ, ಅಂತ ಹೆದರತೈತಿ ಮನಸ್ಸು. ಏನಾರೆ ಆಗಲಿ. ಪ್ರಾರ್ಥನಾದ ಹೊತ್ತು ಸಮೀಪಕ್ಕ ಬಂದೈತಿ; ಲಗು ಗಟ್ಟಿಮಾಡತೇನಿ ಹಾಡು.

ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ...

(ಪಟದೀಪ—ಝುಪತಾಳದಲ್ಲಿ ಶ್ರುತಿಬದ್ಧವಾಗಿ ಹಾಡುವಳು; ಒಂದೆರಡು ಸಲ ಪಲ್ಲವಿಯನ್ನು ತಿರುಗಿಸುವಳು. ಅಷ್ಟರಲ್ಲಿ ಹನುಮಂತಪ್ಪ ಹಿಂಬದಿಯಿಂದ ಬರುವ. ಖಾದಿಯ ವೇಷ, ಕೈಯಲ್ಲಿ ಚೀಲ.)

**ಹನುಮಂತಪ್ಪ** : ಓಹೋ ಹೋ! ಲಕ್ಷ್ಮೀದೇವಿ ವನಲಕ್ಷ್ಮೀದೇವಿ ಆಗಿದ್ದಾಳೇನು ಊರ ಹೊರಗೆ ಬಂದು! ಪ್ರಾರ್ಥನೆಯ ಹೊತ್ತಾಯ್ತು. ಹಾಡು ಕಲಿತಿದ್ದೀರೋ ಇಲ್ಲೋ ಅಂತ ಧಾವಿಸಿ ಬಂದೆ.

**ಲಕ್ಷ್ಮೀ** : ಹಾಡು ಕಲಿಯೋದಕ್ಕೆ ಅಂತಲೇ ಊರಹೊರಗೆ ಬಂದೇನಿ. ಮತ್ತ... ಮತ್... (ನಡುವೆಯೇ ನಾಚಿ ನಿಲ್ಲುವಳು).

**ಹನುಮಂತಪ್ಪ** : ಅದೇನು, ನಡುವೇ ತಡೆದಿರಲ್ಲ! ಮುಖದ ಬಣ್ಣವೂ ಬದಲಾಯಿತು— ಸಂಧ್ಯಾಸಮಯದಲ್ಲಿ ಮುಗಿಲಿಗೆ ಕೆಂಬಣ್ಣ ಬಂದಂತೆ !

**ಲಕ್ಷ್ಮೀ** : ( ನಾಚಿಕೆಯ ಒಯ್ಯಾರದಿಂದ ) ಹಾಗೇನೂ ಇಲ್ಲ— ಹೌದು— ಸಂಜೆಯ ಮುಂದೆ ಬಯಲು ಹವೆಯಲ್ಲಿ ತಿರುಗಾಡಿದರೆ ಆರೋಗ್ಯಕ್ಕೆ ಒಳ್ಳೇದು ಅಂತ ಡಾಕ್ಟರು ಹೇಳಿದ್ದರು; ಮತ್ತೆ ಮುಂಜಾಲೆ ಹೋದವರು ನೀವೂ ತಿರುಗಿ ಬಂದಿದ್ದಿಲ್ಲ. ಮುಳುಗುವ ಸೂರ್ಯನ ಶಾಂತವಾತಾವರಣದೊಳಗ ತಿರುಗಾಡಿದಂತೆಯೂ ಆಯ್ತು; ಮತ್ತೆ ನಿಮ್ಮನ್ನು ನೋಡಿ... (ನಾಚಿ ನಿಲ್ಲುವಳು).... ಆಯ್ತು;...

**ಹನುಮಂತಪ್ಪ** : ಪದಾ ಕಲಿತ ಹಾಗೂ ಆಯ್ತು, ಅಂತ ಬಂದೀರಿ ಹೌದಲ್ಲೋ ? (ನಗುತ್ತ) ಬೇಗನೆ ತಿರುಗಿ ಬರತಿದ್ದೆ. ಆ ಖಾದಿ ಅಂಗಡಿ ಸೆಕ್ರೆಟರಿ ಎಲ್ಲೋ ಮೀಟಿಂಗಿಗೆ ಹೋಗಿದ್ದನಂತೆ; ದಾರೀ ನೋಡೀ ನೋಡೀ ಸಾಕಾಯ್ತು. ಆ ಕೈನೂಲನೆಲ್ಲ ಅಲ್ಲೇ ಇಟ್ಟು ಬಂದೇನಿ. ನಾಳೆ ಹೋಗಿ ಬೇಕಾದದ್ದೆಲ್ಲ ತರತೇನಿ. ಒಳ್ಳೇದು; ಹೋಗೋಣವೇ ಇನ್ನು ?

**ಲಕ್ಷ್ಮೀ** : ಅಷ್ಟೇಕೆ ಅವಸರ ಮಾಡುತೀರಿ ? ಅಲ್ಲಿ ನೋಡಿರಿ, ಸೂರ್ಯ ಎಷ್ಟು ಕೆಂಪಗೆ ಕಾಣುತಾನೆ? ಮುಗಿಲಿಗಂತೂ ಓಕಳೀ ಚೆಲ್ಲಿಧಾಂಗ ಆಗೇತಿ. ಅಲ್ಲೂ ಕಾಮನ ಹಬ್ಬ ನಡೆದೈತೋ ಏನೋ !

ಹನುಮಂತಪ್ಪ : ಅಲ್ಲೂ ಅಂದರೆ ? ಮತ್ತೆಲ್ಲೆಲ್ಲಿ ನಡೆದ್ವದ ?

ಲಕ್ಷ್ಮೀ : ಅದೇನೋ ನನಗೆ ಗೊತ್ತಿಲ್ಲ, ಹೋಗಿರಿೞ ! ಆದರೆ ಹನ್... (ನಡುವೇ ನಾಲಗೆ ಕಚ್ಚಿ) ಏನ್ರೀ, ಈ ಪದಾ ಒಂದೀಟು ಹೇಳಿ ಕೊಡ್ರಿ, ಹ್ಯಾಂಗ ಹಾಡಬೇಕು, ಅಂತ. (ಸಮೀಪಕ್ಕೆ ಬಂದು ನಿಲ್ಲುವಳು).

ಹನುಮಂತಪ್ಪ : ನೋಡಿರಿೞ; ಕಾಗೆ ಕೋಗಿಲೆಗೆ ಹಾಡೋದಕ್ಕೆ ಕಲಿಸಿದಂತೆ ಆದೀತು. (ಲಕ್ಷ್ಮಿ ಒಯ್ಯಾರದಿಂದ ನಗುವಳು.) ಸರಿಯಾಗಿ ಕೇಳಿರಿ— ಹೞಂ!

ರಾಗ—ಪಟದೀಪ ತಾಳ—ಝಂಪಾ

ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ ।
ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ ॥ ಪಲ್ಲ ॥
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ ।
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ;
ಇದೇ ನಮ್ಮ ಕೂಡಲ ಸಂಗಮನೊಲಿಸುವ ಪರಿ ॥

ಆಯಿತಲ್ಲ; ಇದರಂತೆ ಹಾಡಿರಿ.

ಲಕ್ಷ್ಮೀ : (ನಾಚುತ್ತ) ಊಂ ಹೂಂ! ಒಮ್ಮೆ ನಿಮ್ಮ ಕೂಡ ಹಾಡಿ... (ನಾಚಿಕೆ)

ಹನುಮಂತಪ್ಪ : ನಿಮ್ಮ ಕೂಡ ನಾನೂ...? ಆಗಲಿ, ಸರಿಯಾಗಿ ದನಿಗೂಡಲಿ.

(ಇಬ್ಬರೂ ಪಲ್ಲವಿಯನ್ನು ಕೂಡಿ ಹಾಡುವರು. ನುಡಿ ಬಂದಾಗ ಹನುಮಂತಪ್ಪ ಸುಮ್ಮನಾಗುವನು. ಲಕ್ಷ್ಮಿಯೇ ಸರಿಯಾಗಿ ಹಾಡಿ ಮುಗಿಸುವಳು. ಮುಗಿತಾಯದಲ್ಲಿ ಅವನನ್ನು ಪ್ರೇಮಲಜ್ಜೆಗಳಿಂದ ನೋಡುವಳು. ಇಬ್ಬರೂ ಗಟ್ಟಿಯಾಗಿ ನಗುವರು.) ಈಗ ಹೇಗೆ ಬಂತು ನೋಡಿರಿ. (ಮತ್ತೆ ನಗುವರು) ಇದು ಯಾವ ರಾಗ ಗೊತ್ತದೞ ನಿಮಗೆ?

ಲಕ್ಷ್ಮೀ : ( ನಗೆಯ ತೆರೆಗಳನ್ನು ತೂರುತ್ತ ) ನನಗ? ನನಗ ರಾಗ? ನನಗೆ ಗೊತ್ತಿರೋದು ಅನುರಾಗ ಒಂದೞ (ಹೆಚ್ಚಾಗಿ ನಗುವಳು)

ಹನುಮಂತಪ್ಪ : (ಬೆರಗಾಗಿ) ಅನುರಾಗ! ಶುದ್ಧ ಸಂಸ್ಕೃತ ಶಬ್ದ.

ಲಕ್ಷ್ಮೀ : ನೀವೇ ಅವೊತ್ತು ಹೇಳಿದ್ದಿರಲ್ಲ ಪ್ರಾರ್ಥನಾದೊಳಗ-ಪ್ರೇಮ-ಅನುರಾಗ-ಅಂತ.

ಹನುಮಂತಪ್ಪ : ಆದರೆ—ಲಕ್ಷ್ಮೀದೇವೀ, ಇದೇನು ಹುಚ್ಚರಂತೆ ಬಡಬಡಿಸುತ್ತಿದ್ದೀರಲ್ಲ? ಕಾರಣವನ್ನು ಕೇಳಲೇ?

ಲಕ್ಷ್ಮೀ : (ಒಮ್ಮೆಲೆ ಗಂಭೀರವಾಗಿ) ನೀವು ಸಮಾಜ ಸೇವಕರು, ನಿಮ್ಮಂಥವರಿಗೆ ಹೆಣ್ಣಿನ ಹಂಬಲು ಇರಬಾರದು—ಅಂತ ನನಗೂ ಗೊತ್ತು. ಆದರೆ, ನನ್ನ ತಂದೆಯ ಹುಚ್ಚು ಹಟಕ್ಕಾಗಿ ನಿಮ್ಮಿದಿರಿಗೆ ಈ ಮಾತನ್ನು ಎತ್ತಬೇಕಾಯ್ತು.

ಹನುಮಂತಪ್ಪ : ಏನೆಂದಿರಿ? ಮರಿಯಪ್ಪನ ಹುಚ್ಚು ಹಟವೆ?

ಲಕ್ಷ್ಮೀ : ಹೌದು ನಮ್ಮ ಜಾತಿಯೊಳಗೆ ಸೂಳೆಯರನ್ನು ಬಿಡೋ ರೂಢಿ ಐತಿ. ನಮ್ಮ ಅಕ್ಕನ್ನ ನಮ್ಮಪ್ಪ ಸೂಳೆ ಬಿಟ್ಟಿದ್ದ. ಪುಣ್ಯಾತಗಿತ್ತಿ ತಡಾ ಇಲ್ಲದೆ ಸತ್ತು ಸಗ್ಗಾ ಸೇರಿದಳು. ಆದರ ಇರೋ ತನಕಾ ಆಕಿ ಅನುಭವಿಸಿದ್ದು... ಬ್ಯಾಡರಿ. ನೆಪ್ಪಾದರ್ಽ ಮೈಮ್ಯಾಗ ಮುಳ್ಳು ಬರತಾವ! ಅದೆಲ್ಲಾ ಊರವರ ಕಾಲಾಗಽ ಆದದ್ದು. ಈಗ ಅಕ್ಕನ ಸರತಿ ನನಗ ಬಂದೈತಿ. ತಂದೀ ಮಾತಿಗೆ ನಾ ಹೂಂ ಅಂದ್ರಽ ರಾತ್ರೀ ಕಂಡ ಬಾವೀನ್ನ ಹಗಲೇ ಬಿದ್ದಾಂಗಾಗತೈತಿ. ಅದಕ್ಕಽ ಒಳ್ಳೇ ಗಂಡನ್ನ ನೋಡಿ.... (ನಾಚಿ ನಿಲ್ಲುವಳು.)

ಹನುಮಂತಪ್ಪ : ತಿಳೀತು ನಿಮ್ಮ ಅಭಿಪ್ರಾಯ. ಆದರೆ ಇದರಲ್ಲಿ ದುಡುಕಿ ಉಪಯೋಗವಿಲ್ಲ. ನಿಮಗೆ ಸೂಳೆತನದ ದುರವಸ್ಥೆ ಬಾರದಂತೆ ಕಾಯೋ ಹೊಣೆಗಾರಿಕೆ ನನ್ನದು. ಅಂಜಬೇಡಿರಿ. ಆದರೆ...

ಲಕ್ಷ್ಮೀ : (ಕಣ್ಣಲ್ಲಿ ನೀರು ತಂದು) ನಿಮಗೆ ತಕ್ಕ ಹೆಣ್ಣು ಅಲ್ಲ, ಕಲಿತಾಕಿ ಅಲ್ಲಽ ಅಂತ ಹಿಂಚಳಸತೀರೇನು ?

ಹನುಮಂತಪ್ಪ : ಕಲಿತವಳಲ್ಲದಿದ್ದರೆ, ಕಲಿಸುವ ಜವಾಬದಾರಿ ನನಗಿದೆ. ನಿಮ್ಮ ರೂಪದ ಬಗ್ಗೆಯೂ ನನ್ನ ಆಕ್ಷೇಪವಿಲ್ಲ. ಆದರೆ ನೀವು

ಇನ್ನೂ ಚೆನ್ನಾಗಿ ನನ್ನ ಜೀವನದ ಗುರಿಯನ್ನು ಅಭ್ಯಾಸ ಮಾಡಬೇಕು. ಆಗಲೂ, ನಾನೇ ನಿಮ್ಮ ಕೈ ಹಿಡಿಯಬೇಕೆಂದು ನೀವು ಬಯಸೋದಾದರೆ ಅದನ್ನು ಆನಂದದಿಂದ ಒಪ್ಪಿಕೊಳ್ಳುತೇನಿ. ಆದರೆ ನನ್ನದೊಂದು ಪ್ರತಿಜ್ಞೆ ಇದೆ: ಹರಿಜನರ ಮದುವೆಯನ್ನು ಸವರ್ಣೀಯರೇ ಸಂತೋಷದಿಂದ ಮಾಡಿ ಕೊಡುವ ಪರಿಸ್ಥಿತಿ ಬಾರದೆ ನಾನು ಮದುವೆ ಆಗೋದಿಲ್ಲ. ಈ ಪರಿಸ್ಥಿತಿ ಯನ್ನು ನಿರ್ಮಾಣ ಮಾಡಬೇಕೆಂದೇ ನಾನು ಈ ಪವಿತ್ರಕಾರ್ಯಕ್ಕೆ ಕೈ ಹಾಕಿರುವೆ. ಕಾರ್ಯ ಕೈಗೂಡುವ ಮೊದಲೇ ಈ ಮದುವೆಯ ಮಾತನ್ನೆ ತ್ತಿದರೆ, ಸಮಾಜಸೇವಕರ ದಿವ್ಯಚರಿತ್ರೆಗೇ ಕಲಂಕ ತಟ್ಟೀತು. ಅಲ್ಲದೆ, ನಮ್ಮ ಮದುವೆಗೆ ಮಾಧವರಾಯರ ಒಪ್ಪಿಗೆಯನ್ನು ಅವಶ್ಯವಾಗಿ ಪಡೆಯ ಬೇಕಾಗುತ್ತದೆ.

**ಲಕ್ಷ್ಮೀ :** ಮಾಧವರಾಯರು! ಇಂತಾ ಎಳೇ ವಯಸ್ಸಿನ್ಯಾಗ ಎಂತಾ ದೊಡ್ಡ ಮನಸ್ಸು ಅವರದು! ನಮ್ಮ ಜನರನ್ನು ತಿದ್ದಬೇಕು, ಅನ್ನೋ ಭರದೊಳಗ ತಮ್ಮ ತಂದೆಗೆ ಹೊರತಾದರು, ಆಸ್ತಿಯನ್ನು ಬಿಟ್ಟರು. ಇದರದೇನೂ ವೆಸನಾನೇ ಹಚ್ಚಿಕೊಂಡಿಲ್ಲ ಅವರು. ಮತ್ತೆ ಅವರ ಹೆಂಡತಿ ನಿಜವಾಗಿ ಸೀತಾದೇವೀನೇ ಇದ್ಧಾಂಗ ಇದ್ದಾಳ. ಹರಿಜನರ ಮಕ್ಕಳನ್ನ ಹೊಟ್ಟೆಯ ಮಕ್ಕಳನ್ನು ಕಾಪಾಡಿದಂತೆ ನೋಡಿಕೊಳ್ಳುತಾಳೆ. ಹೆಣ್ಣು ಹುಡಿಗೇರಿಗೆ ಕೈ ಮುಟ್ಟಿ ತಲೆಬಾಚಿ ಹೆಳ್ಳು ಹಾಕಳಾಳೆ. ದಿನಾ ಮನಿ ಮನೀಗೆ ಬಂದು ಎಲ್ಲಾ ಕಡೀಗೂ ಜಳಾಜಳಾ ಐತೋ ಇಲ್ಲೋ ಅಂತ ನೋಡತಾಳೆ, ಚೆಂದಾಗಿ ಹ್ಯಾಂಗ ಇರಬೇಕು ಅನ್ನೋದನ್ನ ಕೈ ಮುಟ್ಟಿ ಮಾಡಿ ತೋರಿಸತಾಳೆ. ಸಂತಾನ ಬೆಳೀಲಿ ನಮ್ಮವ್ವಂದು!

**ಹನುಮಂತಪ್ಪ :** ಸೋಗಿನ ಸಮಾಜ ಸೇವಕರಲ್ಲ ಅವರು. ಇದೊಂದು ಉಪಜೀವನದ ಉದ್ಯೋಗ ಅಂತ ಸಂಘ-ಸಂಸ್ಥೆಗಳನ್ನು ನಡೆ ಸುವ ಜನಗಳೇ ಬಹಳ. ಮಾಧವರಾಯನಂಥ ಚೊಕ್ಕಮನಸ್ಸಿನ ಸಮಾಜ ಸೇವಕರು ಊರೂರಿಗೆ ಒಬ್ಬರು ಸಿಕ್ಕರೂ ಸಾಕು; ಈ ಹರಿಜನೋದ್ಧಾರ ಕಾರ್ಯ ಕೈಗೂಡಲಿಕ್ಕೆ ಆರು ತಿಂಗಳೂ ಬೇಕಾಗಲಿಕ್ಕಿಲ್ಲ.

**ಲಕ್ಷ್ಮೀ :** ಅವರ ತಂದೇದಾದರೂ ಎಂತಾ ಕಲ್ಲು ಮನಸ್ಸು ಇದ್ದೀತು ಅಂತೇನಿ. ಬಂಗಾರದಂತ ಮಗನ್ನ ಲಕ್ಷ್ಮೀದೇವಿಯಂತಾ ಸೋಸಿನ್ನ ಹೊರಗ

ಆಟ್ಟಿ, ಬರೇ ತನ್ನ ಕೌಂಸಿಲ್ ಇಲೆಕ್ಶನ್ ಅಂತ ಗಣಾ-ಗಣಾ ತಿರಗಾಕ ಹತ್ಯಾರ.

**ಹನುಮಂತಪ್ಪ** : ಅವರನ್ನು ನಾವು ನಿಂದಿಸಬಾರದು, ಲಕ್ಷ್ಮೀದೇವೀ ಪಕ್ಕಾ ಸನಾತನಿಗಳವರು. ದೇವರು ಧರ್ಮಗಳ ಬಗ್ಗೆ ಹಳೇ ಕಲ್ಪನೆಯನ್ನೇ ಇಟ್ಟುಕೊಂಡವರು, ಅದಕ್ಕೇ ಅಂಟಿಕೊಂಡವರು. ಅದನ್ನು ಆಕ್ಷೇಪಿಸುವವರು ಯಾರು ನತ್ತರೂ ಅವರಿಗೆ ಕೆಡುಕೆನಿಸೋದಿಲ್ಲ. ಇಂಥವರನ್ನು ಕಂಡೇ ಬಸವಣ್ಣನವರು:

ರಾಗ — ತಾಳ.
ದಯವಿಲ್ಲದ ಧರ್ಮವದೇವುದಯ್ಯ ।
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲಿ ।
ದಯವೇ ಧರ್ಮದ ಮೂಲವಯ್ಯ ।
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ ॥

ಎಂದು ಹೇಳಬೇಕಾಯಿತು. ಆ ಜನರಿಗೆ ನಿಜವಾದ ಧರ್ಮದ ಅಜ್ಞಾನದೊಡನೆ ಲೌಕಿಕ ಪತಿಷ್ಠೆಯ ಹುಚ್ಚು ಹಂಬಲವೂ ಬೆರೆತದೆ. ಅದರಿಂದ ಅಧಿಕಾರ ಪದವಿ ಪ್ರಶಸ್ತಿಗಳ ಮೃಗಜಲದ ಬೆನ್ನಟ್ಟಿ ಓಡುತ್ತಿದ್ದಾರೆ. ಆ ತೊಳಲಾಟದಲ್ಲಿ ಅವರಿಗೂ ಎಂದಾದರೊಮ್ಮೆ ನಿಜಸ್ಥಿತಿಯ ಕಲ್ಪನೆ ಬಾರದೆ ಹೋಗಲಿಕ್ಕಿಲ್ಲ. ಆದರೆ, ಅವರ ಭರವಸೆ ಹಿಡಿಯದೆ, ನಾವು ಸಾಧ್ಯವಿದ್ದ ಮಟ್ಟಿಗೂ ಈ ಹರಿಜನೋದ್ಧಾರ ಕಾರ್ಯವನ್ನು ಮುಂದುವರಿಸಬೇಕು. ( ತೆರೆಯಲ್ಲಿ—ಯಾರಂತಾ ಏನ್ ಕೇಳ್ತೀರಿ? ಲೆಕ್ಕದ ಹಕ್ಕೀ ಜತಿ! ಯಾರೂ ಇಲ್ಲ ಅಂತ ಇಲ್ಲಿ ಇಳಿದಾವು, ಆತು. )

**ಹನುಮಂತಪ್ಪ** : ಯಾರವರು? ನಮ್ಮನ್ನು ಎಷ್ಟು ಹೀನದೃಷ್ಟಿಯಿಂದ ನೋಡುತಾರೆ?

**ಲಕ್ಷ್ಮೀ** ಇವರೇ-ದೀಕ್ಷಿತ, ವಿರೂಪಾಕ್ಷಯ್ಯ, ಕ್ವಾಳಾಚಾರಿ ಅಂತ ಪಂಚರು. ಈ ಪುಣ್ಯಾತ್ಮರ ಸಲುವಾಗೇ ಮಾಧವರಾಯ ಮನೆ ಬಿಟ್ಟು ಬರಬೇಕಾತು. ( ಹಲ್ಲು ಕಡಿಯುತ್ತ ) ಅವರನ್ನು ಕಂಡರೆ...ತ...ಒಮ್ಮೆ ಥೂಳಾ ಹಾರಿಸಿ ಬಿಡಡಬೇಕು ಅನಿಸತೈತಿ.

**ಹನುಮಂತಪ್ಪ** : ಅವರ ದುಷ್ಟತನಕ್ಕೆ ನಾವೂ ದುಷ್ಟತನ ಮಾಡಿದರೆ, ಮಹಾತ್ಮರ ತತ್ತ್ವವೇ ತಪ್ಪಿ ಹೋಯ್ತು. ನೇಡಿಗೆ ನೇಡು ಮನುಷ್ಯರನ್ನು ತಿದ್ದೋ ರೀತಿಯಲ್ಲ; ಅದು ಕುರಿಗಳ ಕಾದಾಟ, ಕೋಣಗಳ ಸೆಣಸಾಟ! ನಮ್ಮ ಸರಳತನ ಶಾಂತಿಗಳಿಂದಲೇ ಅವರ ಹೃದಯವನ್ನು ಮಾರ್ಪಡಿಸಬೇಕು.

( ತೆರೆಯಲ್ಲಿ-ಎಲ್ಲಿ ಹೋದರೂ ಈ ಹೊಲೇರ ಮುಖ ನೋಡೋದು ತಪ್ಪಲಿಲ್ಲ. ತಿರುಗಾಡಲಿಕ್ಕೆ ಅಂತ ನಾವು ಬಂದರೆ, ನಮಗಿಂತ ಮೊದಲೇ ಈ ಪೀಡಾ ಇಲ್ಲಿ ಬಂದು ಬಿಟ್ಟಿವೆ. )

**ಲಕ್ಷ್ಮೀ** : ನೋಡಿದಿರ್‍ಯಾ, ಎಷ್ಟು ತಿರಸ್ಕಾರದಿಂದ ಮಾತಾಡತಾರೆ?

**ಹನುಮಂತಪ್ಪ** : ಹರಿಜನರು ವಿದ್ಯಾ-ಬುದ್ಧಿ, ಸ್ವಚ್ಛತೆ-ಸಂಪಾದನೆ-ಇವುಗಳಲ್ಲಿ ಮುಂದುವರಿಯೋ ವರೆಗೂ ಈ ತಿರಸ್ಕಾರ ತಪ್ಪಿದ್ದಲ್ಲ. ಮಾಧವರಾಯರು ಈ ಮಹಾಕಾರ್ಯಕ್ಕಾಗಿಯೋ ಟೊಂಕಕಟ್ಟಿ ನಿಂತಿದ್ದಾರೆ.

**ಲಕ್ಷ್ಮೀ** : ಇಲ್ಲೇ ಆ ಅವಿವೇಕರು ಬರೋಹಾಂಗ ಕಾಣತದೆ. ನಾವಿನ್ನು ಹೋಗೋಣ.!

**ಹನುಮಂತಪ್ಪ** : ಹೆದರಿಕೆಯೇನು ಅವರದು? ಬರಲಿ. ಎರಡು ಮಾತಾಡೋಣ.

( ದೀಕ್ಷಿತ, ವಿರೂಪಾಕ್ಷಯ್ಯ, ಕಾಳಾಚಾರಿ ರಂಗದಮೇಲೆ ಬರುವರು. )

**ಶಂಕರ** : (ಹನುಮಂತಪ್ಪನಿಗೆ) ಅಲ್ರಿಪಾ, ನಮ್ಮೂರ ಹೊಲ್ಯಾರಿಗೆ ಬುದ್ಧಿ ಇಲ್ಲಾ ಅಂದರೆ..., ನಿಮಗೂ ತಿಳೀಬಾರದೇನು ಸಾಲೀ ಕಲಿತವರಿಗೆ? ಸಂಜೆ ಹೊತ್ತಿಗೆ ಇಲ್ಲಿ ಮೇಲಿನ ಜಾತಿಯವರು ಬರತಿರತಾರೆ. ಆಗ ನೀವೂ ಇಲ್ಲಿಯೇ ಇದ್ದರೆ ನಮಗೆ ಮೈಲಿಗೆ ಆಗತದೆ ಅನ್ನೋದು ತಿಳಿಯೋದಿಲ್ಲೇನು?

**ಹನುಮಂತಪ್ಪ** : ನಾವೇನೂ ನಿಮನ್ನು ಮುಟ್ಟಿಲ್ಲ, ನಿಮಗೆ ಮೈಲಿಗೆ ಆಗಲಿಕ್ಕೆ! ಒಂದುವೇಳೆ, ನಿಮ್ಮ ಮಡೀನ್ನ ಕೆಡಿಸಬಾರದು ಅಂತ, ಬೇರೆ ಕಡೆಗೆ ನಿಲ್ಲೋಣ ಅಂದರೆ, ಭೂಮಿತಾಯಿ ಒಬ್ಬಾಕೆಯೇ ಇದ್ದಾಳೆ. ಎಂದ ಮೇಲೆ ನಾವು ಎಲ್ಲಿದ್ದರೇನು? ನಿಮಗೆ ಬೇರೆ ಮೈಲಿಗೆ ಬಿಟ್ಟದ್ದಲ್ಲ!

ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು
ನಡುವೆ ಕುಲದ ಗಸಣೆ ಎತ್ತಣದು ?

ಅಂತ ಸರ್ವಜ್ಞಕವಿ ಕೇಳತಾನಲ್ಲ; ಅದಕ್ಕೇನು ಹೇಳ್ತೀರಿ ?

**ವಿರೂಪಾಕ್ಷಯ್ಯ** : ಅವನಿಗೇನು ಹೇಳೋದು? ಹೇಳೀ ಕೇಳೀ ಸಂನ್ಯಾಸಿ! ಶುದ್ಧ ಧರ್ಮಲಂಡ! ಪಕ್ಕಾ ನಾಸ್ತಿಕ! ಸಂನ್ಯಾಸಿಗೆ ತೆಕ್ಕೆ ಬಿದ್ದರೆ ಮೈಯೆಲ್ಲ ಬೂದೀನ ಅಂತೆ!

**ಹನುಮಂತಪ್ಪ** : ಎಂದಮೇಲೆ, ಆದ್ಯ ಶಂಕರಾಚಾರ್ಯರು ಹೇಳಿದ್ದೆಲ್ಲ ಸುಳ್ಳೇ ಅಂತೀರೇನು? ಯಾಕೆಂದರೆ, ಅವರೂ ಸಂನ್ಯಾಸಿಗಳು! ಅದೂ ಹೋಗಲಿ. ಸ್ವಾಮಿಗಳೇ, ಶ್ರೀ ಬಸವೇಶ್ವರರು ಸಾಂಸಾರಿಕರಷ್ಟೇ? ಅವರು ಕುಲದ ಮೇಲು ಕೀಳುಗಳ ಬಗ್ಗೆ ಏನು ಹೇಳ್ತಾರೆ ಗೊತ್ತಿದೆಯೇ?

ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿತೆಂಬರು,
ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು,
ಎಂತಯ್ಯ ಅವರ ಭಕ್ತರೆಂಬೆ ?
ಎಂತಯ್ಯ ಅವರ ಯುಕ್ತರೆಂಬೆ ?
ಕೂಡಲಸಂಗಮದೇವ ಕೇಳಯ್ಯ ।
ಹೊಲತಿ ಶುದ್ಧ ನೀರಮಿಂದಂತಾಯಿತ್ತು ॥

**ಕಾಳಾಚಾರಿ** : ಅಂತೂ ಕುಲ ಅಂತ ಮಾಡಿದ್ದೇ ತಪ್ಪು ಅಂತೀರಿ ಹೌದಲ್ಲೋ?

**ಹನುಮಂತಪ್ಪ** ಹಾಗೆಲ್ಲಿ ಹೇಳಿದೆ? ಜಾತಿ-ಕುಲ ಅನ್ನೋದು ಉದ್ಯೋಗದಿಂದ ಬಂದ ಹೆಸರು:

ಕಾಸಿ ಕಮ್ಮಾರನಾದ ಬೀಸಿ ಮಡಿವಳನಾದ
ಹಾಸನಿಕ್ಕಿ ನಾಲಿಗನಾದ; ವೇದವನೋದಿ ಹಾರುವನಾದ;
ಅಂಗಸ್ಥಲವನರಿದವನೇ ಕುಲಜನು.

ಇವೆಲ್ಲವೂ ಸಂಸಾರದ ಸುಸೂತ್ರತೆಗೆ ಬೇಕಾದ ಉದ್ಯೋಗಗಳೇ ಅಲ್ಲವೇ? ಎಂದ ಮೇಲೆ ಮೇಲಾವುದು, ಕೀಳಾವುದು?

ಶಂಕರ : ಕಲಿತವರಿಗೆಲ್ಲ ಕುಲದ ಮಹತ್ವ ಕಾಣಲಿಕ್ಕಿಲ್ಲ. ಆದರೆ ಈ ಕುಲಗೇಡಿತನ ಹೆಚ್ಚಾಯ್ತು ಅಂತಲೇ ದೇವರ ಕೋಪ ನಮ್ಮ ಮೇಲೆ ಆಗಲಿಕ್ಕೆ ಹತ್ತೇದ: ದುರ್ಭಿಕ್ಷೆ, ರೋಗ, ಪಿಡುಗು, ಮಹಾಪೂರ ಇಂಥ ವೆಲ್ಲ ಅನಾಹುತ ಆರಂಭ ಆಗಿರೋದು ದೇವರ ಕೋಪದಿಂದಲೇ...

ಹನುಮಂತಪ್ಪ : ದಯಾಮಯನಾದ ದೇವರಲ್ಲಿ ಕೋಪದ ಆರೋಪ ಹೇಗೆ ಮಾಡುತೀರೋ ತಿಳಿಯದು. ಆತನಿಗೆ ಬೇಕಾದದ್ದು ಸದಾಚಾರ ಸದ್ಭಕ್ತಿಯೇ ಹೊರತು ಕುಲವಲ್ಲ; ಜಾತಿಯಲ್ಲ. ಶ್ರೀರಾಮಚಂದ್ರ ದೇವರು ಶಬರಿ ಅನ್ನೋ ಅಸ್ಪೃಶ್ಯ ಸ್ತ್ರೀಯ ಎಂಜಲುವನ್ನು ತಿಂದ; ಶ್ರೀಕೃಷ್ಣ ಪರಮಾತ್ಮ ಕುಬ್ಜೆ ಅನ್ನೋ ಶೂದ್ರ ಸ್ತ್ರೀಯನ್ನು ಅಪ್ಪಿಕೊಂಡು ಆಕೆಯ ವಿರೂಪವನ್ನು ಕಳೆದ; ಅಷ್ಟೇ ಏಕೆ, ಗಜೇಂದ್ರ ಮೋಕ್ಷದ ಕತೆ ಗೊತ್ತಿದೆಯಲ್ಲವೇ ನಿಮಗೆ? ಆ ಪಶುವಿನ ಭಕ್ತಿಗೆ ಕೂಡ ದೇವರು ಮೆಚ್ಚಿದ್ದ. ಉಡುಪಿಯೊಳಗೆ ಕನಕನ ಕಿಂಡಿಯ ಕತೆ ಈಗಲೂ ಕಣ್ಣಿಗೆ ಬೀಳುತ್ತದೆ. ಹೃದಯ ಹಸನಾಗಿದ್ದರೆ ತೀರಿತು. ಅದನ್ನು ದೇವರೇ ಮೆಚ್ಚುತಿರುವಾಗ, ಕುಲ, ಜಾತಿ ಅನ್ನೋ ಕೀಳು-ಮೇಲು ಕಲ್ಪನೆಯನ್ನು ನೀವು ಏಕೆ ಮಾಡಿ ಕೊಳ್ಳುತೀರೋ, ಮನುಷ್ಯ ಮನುಷ್ಯರೊಳಗೆ 'ಮುಟ್ಟಬಾರದು' ಅಂತ ಹೇಗೆ ಹೇಳುತೀರೋ ನನಗೆ ತಿಳಿಯದು. ಇನ್ನು, ಪುರಾಣಗಳೇ ಸುಳ್ಳು ಅನ್ನೋದಾದರೆ ಉಪಾಯವೇ ಇಲ್ಲ.

ವಿರೂಪಾಕ್ಷಯ್ಯ : (ವಿಚಾರಕ್ಕೆ ಬಿದ್ದವನಂತೆ) ನೀವು ಹೇಳೋದೂ ಸುಳ್ಳಲ್ಲ, ಅನ್ನಿರಿ. ಇದು ನಿಜವಿದ್ದರೆ, ಈ ಮುಟ್ಟಬಾರದು ಅನ್ನೋದು ಎಲ್ಲಿಂದ ಬಂತೋ ತಿಳಿಯದಂತೆ ಆಗೇದ. ಅಲ್ಲೇನು, ಕಾಳಾಚಾರೀ?

ಕಾಳಾಚಾರಿ : ನನಗೂ ಇರೋದು ಅದೇ ಸಂಶಯ!

ಹನುಮಂತಪ್ಪ : ನಮ್ಮ ಭಾರತೀಯ ವೇದ ಉಪನಿಷತ್ತು ಸ್ಮೃತಿ ಪುರಾಣಗಳನ್ನು ಓದಿದರೆ ಈ ಸಂಶಯ ತಂತಾನೆ ನಿವಾರಣ ಆಗತದೆ. ನಾನೂ ಒಬ್ಬ ಹರಿಜನ ಅಂತ ನಿಮಗೆ ತಿಳಿದಿರಬೇಕು. ಆದ್ದರಿಂದ, ಆ ವಿಚಾರಗಳನ್ನು ನಾನು ಹೇಳ್ಳಿಕ್ಕೆ ಹೋದರೆ ನೀವು ತಪ್ಪು ತಿಳಕೋತೀರೋ ಏನೋ!

**ಶಂಕರ:** ಛೀ ಛೀ! ನಮಗೆ ತಿಳೀದೇ ಇರೋ ವಿಷಯವನ್ನು, ತಿಳಿದವರು ಹೇಳಿದರೆ ತಪ್ಪೇನು? ಬ್ರಾಹ್ಮಣನಾಗಿ ಹುಟ್ಟಿ ನಾನು ಈ ವಿಷಯವನ್ನು ತಿಳಕೊಳ್ಳೋದಕ್ಕೆ ಪ್ರಯತ್ನ ಮಾಡಲಿಲ್ಲವಲ್ಲ; ರೂಢಿಗೆ ಬಲಿಬಿದ್ದು ಎಂತೆಂಥ ಕೆಟ್ಟ ಕೆಲಸ ಮಾಡಿದೆನಲ್ಲ, ಅಂತ ಈಗ ಕೆಡುಕೆನಿಸತದೆ.

**ಹನುಮಂತಪ್ಪ:** ದೇವರು ಇದೇ ಸದ್ಬುದ್ಧಿಯನ್ನು ಕೊಡಲಿ ನಿಮಗೆ! ನಮ್ಮ ಸಂಸ್ಕೃತ ಶಾಸ್ತ್ರಗಳ ಮೇಲೆ ಅನೇಕರು ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಅವುಗಳ ಸಾರಾಂಶವಿಷ್ಟೇ: ವೇದಕಾಲದೊಳಗಾಗಲಿ ಮಹಾಭಾರತ ಕಾಲಕ್ಕಾಗಲಿ ಈ ಪಂಚಮರು ಅಥವಾ ಅಸ್ಪೃಶ್ಯರು ಅನ್ನೋ ಅಯ್ದನೆಯ ವರ್ಣ ಇರಲೇ ಇಲ್ಲ. ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಕೂಡ ಉದ್ಯೋಗ ಭೇದವೇ ಹೊರತು ಕುಲದ ಕೀಳು ಮೇಲುಗಳ ವಿಚಾರವಿಲ್ಲ. ಮುಂದೆ, ಜನರು ತಮ್ಮ ತಮ್ಮ ಕರ್ತವ್ಯಗಳನ್ನು ಮರೆತರು. ತಮ್ಮ ಪ್ರತಿಷ್ಠೆಯನ್ನು ಬೆಳೆಸಿಕೊಳ್ಳೋದಕ್ಕೆ, 'ಜನ್ಮದಿಂದ ಜಾತಿ'ಯ ತಿರುಳಿಲ್ಲದ ತತ್ವವನ್ನು ಮುಂದೆ ಮಾಡಿದರು. ಆ ಮೇಲೆಯೇ ಜಾತೀಯ ಶ್ರೇಷ್ಠ—ಕನಿಷ್ಠತೆಗಳ ಬಳಕೆ ಹೆಚ್ಚಾಯಿತು. ಅಷ್ಟರೊಳಗೇ ಕೆಲವರು ತೀರಾ ನಿಂದ್ಯ ಕರ್ಮಗಳಲ್ಲಿ ಎಂದರೆ, ಕುಡಿಯೋದು ತಿನ್ನೋದು ವೇಶ್ಯಾಗಮನ ಸುಳ್ಳು ಜೂಜು-ಹೀಗೆ ಕೆಟ್ಟ ಆಚಾರ—ವಿಚಾರಗಳೊಳಗೆ ತೊಡಗಿದ್ದರು. ಅವರನ್ನು ಬಹಿಷ್ಕಾರ ಹಾಕಿ ಊರಿಂದ ದೂರದಲ್ಲಿ ಇಡಬೇಕಾಯಿತು. ಬರಬರುತ್ತ, ಅದರೊಳಗೆ ನೀತಿಯ ಪ್ರಶ್ನೆ ಹೋಗಿ ಜಾತಿಯ ಹೆಮ್ಮೆ ತಲೆಯೆತ್ತಿತು. ಅದೇ ರೂಢಿಯಾಗಿ, ಹೊಲೆಯರನ್ನು ಮುಟ್ಟಬಾರದು ಅನ್ನೋದು ಜನರ ಮನಸ್ಸಿನೊಳಗೆ ನಾಟಿಬಿಟ್ಟಿತು. ಅದೇ ಈ ವರೆಗೂ ಸಾಗಿ ಬಂದ್ಯದ.

**ವಿರೂಪಾಕ್ಷಯ್ಯ:** ಆದರೆ, ಈ ರೂಢಿಯಿಂದ ತಪ್ಪೇನಾಯ್ತು ಅಂತ ಎಲ್ಲರಿಗೂ ತಿಳಿದರೆ, ಈ ಕೆಟ್ಟ ರೂಢಿ ತಂತಾನೇ ಹೋದೀತು; ಹರಿಜನರ ಉದ್ಧಾರ ತಡವಿಲ್ಲದೆ ಆದೀತು.

**ಹನುಮಂತಪ್ಪ:** ಆ ತಪ್ಪನ್ನು ತಿಳಿಯಬೇಕಾದರೆ, ಈಗಿನ ಸಮಾಜವನ್ನು ಕಣ್ಣು ತೆರೆದು ನೋಡಬೇಕು. ಅದರೊಳಗೆ ನೀತಿ, ಧರ್ಮ, ಸಂಪತ್ತು, ದೇಶಪ್ರೇಮ, ಆತ್ಮಗೌರವ, ಬುದ್ಧಿಮತ್ತೆ, ದೈಹಿಕಶಕ್ತಿ-ಹೀಗೆಯೇ ಎಲ್ಲಾ ರೀತಿಗಳಿಂದಲೂ ಭರತಖಂಡ ಅವನತಿಗೆ ಇಳಿದದ್ದು ಸ್ಪಷ್ಟವಾಗಿ ಕಂಡು

ಬರುತದೆ. ಪರಿಣಾಮವಾಗಿ ಏಳೆಂಟುನೂರು ವರುಷಗಳ ವರೆಗೆ ಪರಕೀಯರು ನಮ್ಮನ್ನು ತುಳಿದು ಆಳಿದರು; ಭರತಖಂಡದೊಳಗೆ ಮನುಷ್ಯರಿದ್ದಾರೋ, ಎಂದು ಪರದೇಶೀಯರು ಹಾಸ್ಯಮಾಡುವಂತಾಯಿತು. ಮಹಾತ್ಮರ ತಪೋಬಲದಿಂದ ನಮ್ಮ ಭಾರತ ಈಗ ಸ್ವತಂತ್ರ ಆಗೇದ. ಸಿಕ್ಕ ಸ್ವಾತಂತ್ರ್ಯ ದಕ್ಕಬೇಕಾದರೆ, **ಭಾರತೀಯರೆಲ್ಲರಲ್ಲಿಯೂ ಮಾನವ ಸಮಾನತೆಯು, ಸಮಾಜ ಸಾಮರಸ್ಯದ—ಭಾವನೆ ಮೊಳೆಯುಬೇಕು, ಬೆಳೆಯುಬೇಕು; ಜಾತೀಯತೆಯು ಶ್ರೇಷ್ಠ–ಕನಿಷ್ಠತೆಯು ಕಲ್ಪನೆ ಕಣ್ಮರೆಯಾಗಬೇಕು.**

( ಅಷ್ಟರಲ್ಲಿ ಡಾಕ್ಟರರು ಬರುವರು. ಅವರ ಹಿಂದೆ ಹರಿಜನ ಹುಡುಗನೊಬ್ಬ ಡಾಕ್ಟರರ ಹ್ಯಾಂಡ ಬ್ಯಾಗ್ ಹಿಡಿದುಕೊಂಡಿರುವ. ಹುಡುಗ ಸ್ವಚ್ಛವಾದ ಖಾದಿ ವೇಷದಲ್ಲಿದ್ದಾನೆ. )

ನಮಸ್ಕಾರ ಡಾಕ್ಟರರೇನ್ರಿ; ಹಳ್ಳಿಗೆ ಹೋಗಿದ್ದಿರೇನು ವ್ಹಿಜಿಟ್‌ಗೆ?

**ಡಾಕ್ಟರ :** ನಮಸ್ಕಾರ; ನೀವು...ಆದರೆ,ಇದೇನು! ಮೇಲಿನ ವರ್ಣದ ಮಹಾಶಯರು ಹರಿಜನರ ಗಾಳಿಗೆ ಮೈಯೊಡ್ಡಿ ನಿಂತಿದ್ದಾರಲ್ಲ! ಆಶ್ಚರ್ಯ, ಪರಮಾಶ್ಚರ್ಯ!

**ಶಂಕರ :** ಆಶ್ಚರ್ಯವೇನಿಲ್ಲ ಡಾಕ್ಟರರೇ ! ನೀವು ಶಸ್ತ್ರಗಳಿಂದ ಮಂದಿಯ ಕಣ್ಣುಗಳ ಮೇಲಿನ ಪರೆಯನ್ನು ತೆಗೀತೀರಿ; ಈ ಹನುಮಂತಪ್ಪ ಮಮತೆಯ ಮಾತುಗಳಿಂದಲೇ ನಮ್ಮ ಕಣ್ಣು -ಬುದ್ಧಿಗಳಿಗೆ ಮುಸುಕಿದ ಪರೆಯನ್ನು ತೆಗೆದು ಬಿಟ್ಟ.

**ಕಾಳಾಚಾರಿ :** ಡಾಕ್ಟರರೇ, ಈ ಹುಡುಗ ಯಾರು? ಮಾದಿಗರ ದುರಗಪ್ಪನ ಮಗ ಅಲ್ಲವೇ? ನಿಮ್ಮಲ್ಲಿ ನೌಕರಿ ಮಾಡುತಿದ್ದಾನೇನೋ!

**ಡಾಕ್ಟರ :** ಯಾಕೆ, ತಪ್ಪಾಯ್ತೇನು ಇವನನ್ನು ನೌಕರಿಗೆ ಇಟ್ಟುಕೊಂಡದ್ದು? ನಮಗೂ ಹಾಕತೀರೇನು ಬಹಿಷ್ಕಾರನ್ರಿ?

**ವಿರೂಪಾಕ್ಷಯ್ಯ :** ಉಂಟೇ ಡಾಕ್ಟರರೇನ್ರಿ ! ಹರಿಜನೋದ್ಧಾರ ಕಾರ್ಯದೊಳಗೆ ಇದೂ ಒಂದು ಮಹತ್ವದ ಅಂಗ. ಅವರನ್ನು ಮುಟ್ಟಬೇಕು ಅಂತ ಬಾಯಿಂದ ಹೇಳಿದ ಮಾತ್ರಕ್ಕೇ ಕೆಲಸ ಆಗಲಿಲ್ಲ; **ಹರಿಜನರನ್ನು ನಮ್ಮ ಕಾರ್ಯಗಳೊಳಗೆ ಸಹಕಾರಿಗಳನ್ನು ಮಾಡಿಕೊಳ್ಳೋದು**

**ಆದರ್ಶ ಹರಿಜನೋದ್ಧಾರ.** ಊರಜನರಿಗೆ ಒಂದಿಲ್ಲೊಂದು ಕಾರ್ಯದಲ್ಲಿ ಆಳುಗಳು ಬೇಕೇ ಆಗುತವೆ. ಆ ಪ್ರಸಂಗದೊಳಗೆ ಹರಿಜನರನ್ನೇ ಆ ಕೆಲಸ ಗಳೊಳಗೆ ನೇಮಿಸಿಕೊಳ್ಳೋದು, ಸಾರ್ವಜನಿಕ ಸಂಘ-ಸಂಸ್ಥೆಗಳಲ್ಲಿ ಅವ ರನ್ನು ಸದಸ್ಯರನ್ನು ಮಾಡಿಕೊಳ್ಳೋದು—ಇವೆಲ್ಲ ಪರಸ್ಪರ ಮಮತಾ ಬೆಳೀ ಲಿಕ್ಕೆ-ಒಡನಾಟ ಹೆಚ್ಚಿಸಲಿಕ್ಕೆ ಕಾರಣ ಆಗತವೆ.

ಕಾಳಾಚಾರಿ : ಹಾಗೆ ಮಾಡೋದರೊಳಗೆ, ಒಂದೇ ಕಲ್ಲಿನಿಂದ ಎರಡು ಹಣ್ಣುಗಳನ್ನು ಕೆಡವಿದಂತೆ ಆಗತದೆ. ಹರಿಜನರನ್ನು ದೂರ ಇಡೋ ಕಾರಣ ಅಂದರೆ, ಅವರ ಅಸ್ವಚ್ಛತನ. ಮೇಲಿನ ಜಾತಿಯವರು ಅವರನ್ನು ಹತ್ತರ ಇಟ್ಟುಕೊಳ್ಳುತಾರೆ ಅಂದಾಗ, ಹರಿಜನರು ತಂತಾವೇ ಜಳಜಳ ಇರ ಲಿಕ್ಕೆ ಕಲೀತಾರೆ. ಅನಾಯಾಸವಾಗಿಯೇ ಅವರಿಗೆ ಸ್ವಚ್ಛತಾದ ಚಟ ಹತ್ತಿದಂತೆ ಆಗತದೆ.

**ಶಂಕರ** : ಅಷ್ಟೇ ಅಲ್ಲ; ಅವರ ಕುಡಿಯೋ ತಿನ್ನೋ ಚಟಗಳೂ ಹೋಗಿ ಬಿಡತವೆ. ಹೀಗಾಗಿ ಅವರ ದುರ್ಗುಣ ದುರಾಚಾರಗಳು ಹೋಗೋ ದಲ್ಲದೆ, ದುಡ್ಡು ಕೂಡ ಕೂಡಿಬೀಳುತದೆ, ಸಾಂಪತ್ತಿಕ ಸ್ಥಿತಿ ಸುಧಾರಿಸುತದೆ ! ಹೌದಲ್ಲವೇ ಡಾಕ್ಟರರೇ ?

**ಡಾಕ್ಟರ** : ನಿಜವನ್ನೇ ಹೇಳಿದಿರಿ. ಆದರೆ ಇದು ಮಾತಿನೊಳಗೇ ಉಳೀಬಾರದು. ನಿಮ್ಮ ನಿಮ್ಮ ಮನೆಗಳೊಳಗೆ ಹರಿಜನರನ್ನು ಕೆಲಸಕ್ಕೆ ನೇಮಿಸಿಕೊಳ್ಳಬೇಕು.

**ವಿರೂಪಾಕ್ಷಯ್ಯ** : ನಮಗೇನೂ ಹೊಸದಲ್ಲ ಅನ್ನಿರಿ ಇದು. ನಮ್ಮ ಬಸವಣ್ಣನವರೇ ಮಾಡಿ ತೋರಿಸಿದ್ದಾರೆ. ನಾವೂ ಅವರಂತೆಯೇ ಮಾಡಿದರೆ, ಹರಿಜನೋದ್ಧಾರವನ್ನು ಮಾಡಿದ ಪುಣ್ಯ ಅನಾಯಾಸವಾಗಿಯೇ ನಮ್ಮ, ಪಾಲಿಗೆ ಬರತದೆ.

**ಡಾಕ್ಟರ** ಒಂದು ರೀತಿಯಲ್ಲಿ ನಿಮ್ಮ ಮಾತನ್ನು ಒಪ್ಪುತೇನೆ. ಆದರೆ ನನ್ನ ಅಭಿಪ್ರಾಯದಲ್ಲಿ—ಹರಿಜನರ ಸಲುವಾಗಿ ಹರಿಜನರನ್ನು ಉದ್ಧಾರ ಮಾಡೋದಕ್ಕಿಂತ, ನಾವು ಎಂದರೆ **ಮೇಲಿನ ಜಾತಿಯವರು ಸುಖದಿಂದ**

ಇರಬೇಕಾದರೆ ಹರಿಜನರ ಉದ್ಧಾರವನ್ನು ಮಾಡಿಯೇ ಶೀರಬೇಕಾಗುತ್ತದೆ.

**ಕಾಳಾಚಾರಿ :** ಒಳ್ಳೇ ವಿಚಿತ್ರ ವಾದವನ್ನು ಹೂಡಿದಿರಿ. (ನಗುವರು)

**ಡಾಕ್ಟರ :** ನಗತಕ್ಕ ಮಾತಲ್ಲ ಕಾಳಾಚಾರ್ರೇsss ! ನಾವಿರೋ ಸಮಾಜ ಸರೋವರವಿದ್ದ ಹಾಗೆ. ಯಾವುದೋ ಕಾರಣದಿಂದ, ನಾವು ಮೇಲಿನ ತಿಳಿನೀರಾಗಿದ್ದೇವೆ; ಹರಿಜನರು ತಳಕ್ಕೆ ಅಂಟಿಕೊಂಡ ಕೆಸರಿನಂತೆ ಇದ್ದಾರೆ. ತಿಳಿನೀರು ತಿಳಿಯಾಗಿಯೇ ಉಳಿಯಬೇಕಾದರೆ ತಳದೊಳಗಿನ ಕೆಸರು ಕಲಕು ಮಲಕು ಆಗಬಾರದು. ಅಲ್ಲಿ ಕಳಕು ಎದ್ದರೆ ಅದು ತುದೀ ತನಕಾ ಬರೋದಿಲ್ಲವೇ ? ಹರಿಜನರು ಅಶಿಕ್ಷಿತರಾಗಿರುವವರೆಗೆ ತಳದೊಳಗಿನ ತಾಕಲಾಟ ತಪ್ಪಿದ್ದೇ ಅಲ್ಲ. ಆದಕ್ಕಾಗಿಯೇ ಹೇಳಿದೆ-ಮೇಲಿನ ಜಾತಿಯವರು ಸುಖದಿಂದ ಇರಬೇಕಾದರೆ ಹರಿಜನರ ಉದ್ಧಾರವನ್ನು ಮಾಡಿಯೇ ತೀರಬೇಕಾಗುತದೆ, ಅಂತ! ಇದರಲ್ಲಿ ಪುಣ್ಯದ ಪ್ರಸಂಗವೇ ಇಲ್ಲ

**ವಿರೂಪಾಕ್ಷಯ್ಯ :** ಸರಿ, ಒಪ್ಪೋಣ. ಹರಿಜನೋದ್ಧಾರ ಮಾಡೋದರಲ್ಲಿ ಮೇಲಿನ ಜಾತಿಯವರ ಬುದ್ಧಿವಂತಿಕೆ ತೋರುತದೆ, ಅನ್ನೋದನ್ನಾದರೂ ಒಪ್ಪುತೀರೋ ಇಲ್ಲೋ ?

**ಡಾಕ್ಟರ :** ಜಾತಿಯೊಳಗೆ ಮೇಲೆ ಕೆಳಗೆ ಅಂತ ಭಾವನೆ ಇಟ್ಟುಕೊಂಡಿರೋದು ಬುದ್ಧಿವಂತಿಕೆಯ ಲಕ್ಷಣವಲ್ಲ. ಅದರಿಂದ ಮಾನವ ಸಮಾನತೆ ಸಾಧಿಸೋದಿಲ್ಲ.

**ಹನುಮಂಪ್ಪ :** ಡಾಕ್ಟರರೇ, ಒಂದಳತೆಯ ಮೇಲೆ ಚಾಟೀ ಏಟು ಹಾಕುತಾ ಇದ್ದೀರಲ್ಲ ! (ನಗುವ)

**ಡಾಕ್ಟರ :** ನಿಜವನ್ನೇ ಹೇಳತಿದ್ದೇನೆ ಹನುಮಂತಪ್ಪs ! ನನ್ನ ಅಭಿಪ್ರಾಯದಲ್ಲಿ, ಅದು ಬುದ್ಧಿವಂತಿಕೆಯ ಲಕ್ಷಣವಲ್ಲ; ಅಜ್ಞಾನವನ್ನು ಮಾತ್ರ ಮುಚ್ಚಿಕೊಂಡಂತೆ ಆಗತದೆ. ಇಷ್ಟೇಅಲ್ಲ, ಒಂದು ರೀತಿಯಿಂದ, ಹರಿಜನರದೇ ದೊಡ್ಡ ಮನಸ್ಸು ಅಂತ ಕಾಣತದೆ. ಏಕೆಂದರೆ, ಅವರನ್ನು ಮುಸಲ್ಮಾನರಲ್ಲಿ ಇಲ್ಲವೆ ಕ್ರಿಸ್ತಧರ್ಮದಲ್ಲಿ ತೆಗೆದುಕೊಳ್ಳೋದಕ್ಕೆ ಆ ಧರ್ಮಗಳಲ್ಲಿ ಮುಕ್ತದ್ವಾರವಿದೆ. ಹಾಗೇನಾದರೂ ಹರಿಜನರು ಮನಸ್ಸನ್ನು ಹರಿಬಿಟ್ಟಿದ್ದರೆ,

ಆ ಹೊಸ ಸಾಹೇಬಜಾತಿಯ ಹರಿಜನರನ್ನು ದೂರ ಇಡೋದಕ್ಕೆ ಬರುತಿದ್ದಿಲ್ಲ, ಈ ಸವರ್ಣೀಯ ಹಿಂದುಗಳಿಗೆ! ಇದರಿಂದ ಸನಾತನಿಗಳ ಅಜ್ಞಾನವೇ ಬೈಲಿಗೆ ಬರುತಿತ್ತು. ಅಲ್ಲವೇ? ಒಪ್ಪುತೀಯಿಲ್ಲೊ ಕಾಳಾಚಾರೀ?

**ಕಾಳಾಚಾರಿ :** ಕಾಸಿದ ಬಂಗಾರಕ್ಕೆ ಏಟು ಹಾಕುತೀರಿ ಅಂದಾಗ, ಹಿಗ್ಗಿತೋ ಇಲ್ಲೋ ಅಂತ ಕೇಳಬೇಕೇನ್ರಿ?

**ಡಾಕ್ಟರ :** ನಾವು ವೈದಿಕ ಧರ್ಮದವರು ಅಂತ ಹೇಳಿಕೋತೇವಿ. ವೇದದೊಳಗೆ

ಸಂಗಚ್ಛಧ್ವಂ ಸಂವದಧ್ವಂ ಸಂವೋ ಮನಾಂಸಿ ಜಾನತಾಮ್ ।
ದೇವಾ ಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ ॥

ಎಂಬ ಮಂತ್ರವಿದೆ. ಅದು, ಮಾನವರೆಲ್ಲರೂ ಕೂಡಿ ನಡೆಯಿರಿ, ನುಡಿಯಿರಿ, ಒಡನಾಡಿರಿ—ಎಂದು ಉಪದೇಶ ಮಾಡುತ್ತಿದೆ. ಇದನ್ನು ತಿಳಿದವರೆಷ್ಟು ಜನ? ತಿಳಿದರೂ ಅದರಂತೆ ನಡೆವವರೆಷ್ಟು ಜನ? ಎಂದಮೇಲೆ ಪಶುಗಳಿಗಿಂತಲೂ ಕಡೆಮಾಡಿ ಹರಿಜನರನ್ನು ಮುಟ್ಟದೆ ದೂರ ಇಟ್ಟದ್ದು ಸವರ್ಣೀಯರ ಅಜ್ಞಾನ ಅಂತ ಒಪ್ಪಲೇಬೇಕಾಗತದೆ. ಈ ಅಜ್ಞಾನದ ಅನಾಹುತವನ್ನು ತಪ್ಪಿಸೋದಕ್ಕಾಗಿಯೇ ಆರ್ಯ ಸಮಾಜ, ಬ್ರಹ್ಮೋಸಮಾಜ ಶೀಖಪಂಥ ಮುಂತಾಗಿ ಹುಟ್ಟಿದುವು; ಹರಿಜನರನ್ನು ಧರ್ಮಾಂತರಿತರಾಗದಂತೆ ಕಾಪಾಡಿದುವು. ಇಲ್ಲವಾದರೆ ಹಿಂದುಗಳ ಸಂಖ್ಯೆ ಯಾವಾಗಲೋ ಸಂಪುಷ್ಟಕ್ಕೆ ಬಂದು ಹೋಗುತಿತ್ತು.

**ಶಂಕರ :** ಅಂತೂ ಹರಿಜನೋದ್ಧಾರ ವಿಷಯವನ್ನು ಚೆನ್ನಾಗಿ ೞರಿ.

**ಡಾಕ್ಟರ :** ನನ್ನ ಹೊಟ್ಟೆಯ ಪಾಡಿನೊಳಗೆ ಇದಕ್ಕೆಲ್ಲಿ ಅವಕಾಶ ಸಿಕ್ಕುತಿತ್ತು? ನಿಜವಾಗಿ ನನ್ನ ಗುರು ಅಂದರೆ ಮಾಧವರಾಯ. ಆತ ಕೊಟ್ಟ ಪುಸ್ತಕಗಳನ್ನು ಓದಿದಾಗ ನನ್ನ ತಪ್ಪು ನನಗೆ ತಿಳಿಯಿತು. ಅಂದಿನಿಂದ ಹರಿಜನರೊಡನೆ ನಿರ್ಭಯವಾಗಿ ಬಂಧುಭಾವದಿಂದ ಇರತೊಡಗಿದೆ.

**ವಿರೂಪಾಕ್ಷಯ್ಯ :** ಆಯ್ತು. ನಮ್ಮನ್ನೂ ನಿಮ್ಮ ಗುಂಪಿನೊಳಗೆ ಸೇರಿಸಿಕೊಂಡರೆ ಉಪಕಾರ ಮಾಡಿದಂತೆ ಆಗತದೆ.

ಡಾಕ್ಟರ : ಪೆರವರ ಒತ್ತಾಯಕ್ಕಾಗಿ ಮಾಡೋ ಕೆಲಸ ಅಲ್ಲ ಇದು, ಸ್ವಾಮಿಗಳೇ! ನಿಜಕ್ಕೂ ನಿಮ್ಮ **ಹೃದಯ ಪರಿವರ್ತನೆ** ಆಗಬೇಕು.

ವಿರೂಪಾಕ್ಷಯ್ಯ. ನಮಗೆ ಇನ್ನು ಹೆಚ್ಚಿಗೆ ಹೇಳೋದು ಅವಶ್ಯವಿಲ್ಲ. ಬುದ್ಧಿ ಬಂದು ಬಿಟ್ಟದೆ; ಆದರೆ, ನಾವು ತಿಳಿದೂ ತಿಳಿದೂ ಒಂದು ತಪ್ಪು ಮಾಡಿದೇವೆ. ಆ ತಪ್ಪಿನ ಫಲವನ್ನು ಮಾಧವರಾಯ ಅನುಭೋಗಿ ಸುತ್ತಾ ಇದ್ದಾನೆ. ಇದನ್ನು ತಿದ್ದಿಕೊಳ್ಳೋದು ಹ್ಯಾಗೆ, ಅನ್ನೋದು ತಿಳಿಯ ದಂತೆ ಆಗೇದ; ಅಲ್ಲವೇ ದೀಕ್ಷಿತರೇ?

ಶಂಕರ : ನಿಜ, ನಿಜ; ಡಾಕ್ಟರರೆ, ಆ ತಪ್ಪಿನೊಳಗೆ ನಮ್ಮದೂ ಪಾಲು ಅದೆ.

ಕಾಳಾಚಾರಿ · ಮತ್ತೆ ನಮ್ಮನ್ನು ಯಾಕೆ ದೂರ ಉಳಿಸತೀರಿ? ಡಾಕ್ಟರರೆ, ನಾವು ಮೂವರೂ ಕೂಡಿ ಮಾಧವರಾಯರ ವಿರುದ್ಧ ಶ್ರೀನಿವಾಸರಾಯರಿಗೆ ಇದ್ದದ್ದೊಂದು ಇಲ್ಲದ್ದೊಂದು ಚಾಡಿ ಚುಚ್ಚಿ, ಇದ್ದೊಬ್ಬ ಮಗನನ್ನ ಮನೆ ಬಿಡಿಸಿ ಹೊರದೂಡುವಂತೆ ಮಾಡಿದೇವೆ. ಈಗ ನಮ್ಮ ತಪ್ಪು ನಮಗ ತಿಳಿದದ. ಇದಕ್ಕೆ ತಕ್ಕಂತೆ ರಾಯರ ಹೃದಯ ವನ್ನಿಷ್ಟು ಪರಿವರ್ತನೆ ಮಾಡಿಬಿಟ್ಟರೆ, ನಮ್ಮಂಥ ಸಾವಿರಾರು ಜನರಿಂದಲೂ ಆಗದಷ್ಟು ಮಹಾಕಾರ್ಯವನ್ನು ಅವರೊಬ್ಬರೇ ಮಾಡುತಾರೆ. ಅವರಿಗೆ ಮುಂದಾಳಾಗಿ ದುಡೀಲಿಕ್ಕೆ ನಾವು ಇದ್ದೇ ಇರತೇವೆ. ಆದರೆ, ರಾಯರ ಇದಿರಿಗೆ ಈ ವಿಷಯವನ್ನು ಎತ್ತೋದಕ್ಕೆ ನಮ್ಮ ದೋಷಿ ಮನಸ್ಸು ಹಿಂಚಳಿ ನತದೆ. ದಯವಿಟ್ಟು, ಈ ಕಾರ್ಯದಲ್ಲಿ ನೀವು ಮುಂದಾದರೆ ಎಲ್ಲಾ ಸರಿ ಹೋಗತದೆ.

ಡಾಕ್ಟರ : ಸಂತೋಷದಿಂದ ಮುಂದಾಗತೇನೆ; ಆದರೆ ಆ ಹಿರಿಯ ರಿಗೆ ಉಪದೇಶ ಮಾಡೋದು ಅಸಂಗತ ಆದೀತು. ನಾಳೆ ಮಧ್ಯಾಹ್ನಕ್ಕೆ ನೀವು ನಮ್ಮ ದವಾಖಾನೆಗೆ ಬನ್ನಿರಿ. ನಾನು ನಿಮಗೆಲ್ಲ ರಂಗತಾಲೀಮು ಮಾಡಿಸತೇನಿ. ಅದರಂತೆ ನೀವು ಅಭಿನಯ ಮಾಡಿದರೆ ತೀರಿತು; ರಾಯರ ಮನಸ್ಸು ತಾನಾಗಿಯೇ ತಿರುಗತದೆ. ತಪ್ಪದೆ ಬರಬೇಕು ನಾಳೆ; ಅಲ್ಲಿಂದಲೇ ಎಲ್ಲರೂ ಕೂಡಿ ಹೋಗೋಣ.

ಕಾಳಾಚಾರಿ: ಅಲ್ಲSSS, ಇಲೆಕ್ಷನ್ ಗಡಬಿಡಿಯೊಳಗ ತೊಡಗೇದ ಅವರ ಮನಸ್ಸು...

ಡಾಕ್ಟ: ಅವರ ಚಿಂತೆ ಬೇಡ. ಅವರ ಪರಿವಾರ ದೇವತೆಗಳಾದ ನಿಮ್ಮನ್ನು ತಿದ್ದೋದೇ ನನಗೆ ಜಡ ಅನಿಸಿತ್ತು. ರಾಯರಿಗೆ ಲೌಕಿಕ ಕೀರ್ತಿ ಕಾಮನೆ ಇರಬಹುದು; ಆದರೆ, ಅದಕ್ಕಿಂತಲೂ ಹೆಚ್ಚಾಗಿ ಅವರು ದೇವರು ಧರ್ಮಗಳನ್ನು ನಂಬಿಕೊಂಡಿದ್ದಾರೆ. ಆದರೂ ಅವರ ಮನಸ್ಸು, ಪಿತಾಪುತ್ರ ವಿಯೋಗ ಪ್ರಸಂಗವನ್ನು ಕುರಿತು, ಈಗಾಗಲೇ ವಿಚಾರ ಮಾಡುತ್ತಿದ್ದಿರ ಬೇಕು, ಸತ್ಯಾನ್ವೇಷಣೆಗೆ ತೊಡಗಿರಬೇಕು. ಮಾಧವರಾಯರ ಕರ್ತವ್ಯ ನಿಷ್ಠೆ, ಶೀಲಶುದ್ಧ ಪವಿತ್ರಾಚರಣೆಗಳ ವಾರ್ತೆಗಳು ಅವರ ಕಿವಿಗೆ ಬೀಳಲಿ; ಆಗ ಅವರ ನಿರ್ಮಲ ಹೃದಯದಲ್ಲಿ ದಿವ್ಯ ತೇಜಸ್ಸು ಹೊಳೆದೇ ತೀರುವುದು. ಹನುಮಂತಪ್ಪಾ,ದುರುಗಪ್ಪ ಹೇಗೂ ರಾಯರ ಮನೆಯಲ್ಲೇ ಇರತಾನೆ. ಅವ ನಿಗೆ ಮಾಧೂರಾಯರ ದಿವ್ಯ ಕೃತಿಗಳೆಲ್ಲ ಅನುಭವದಲ್ಲಿಯೇ ಇವೆ. ಅವು ಗಳನ್ನೇ ಇದ್ದಕ್ಕಿದ್ದಂತೆ ರಾಯರ ಇದಿರಿಗೆ ಇಡಲಿಕ್ಕೆ ಅವನಿಗೆ ತಿಳಿಸಿರಿ. ನಾವೂ ಸಮಯ ಸಾಧಿಸಿ ಅಲ್ಲಿಗೆ ಹೋಗುತೇವಿ.

ಹನುಮಂತಪ್ಪ : ಅವಶ್ಯವಾಗಿ ಹೇಳತೇನೆ. ಈಗ ನಮ್ಮ ಪ್ರಾರ್ಥನಾ ಸಮಯ ನೀವೂ ಅಲ್ಲಿಗೆ ಬಂದಿದ್ದರೆ......

ಡಾಕ್ಟರ : ಈ ಪ್ರಾರ್ಥನೆಯಲ್ಲಿ ವಿಶೇಷವೇನೂ ಇಲ್ಲ. ಹರಿ ಜನೋದ್ಧಾರಕ್ಕಾಗಿ ಹರಿಜನರಿಗೇ ಹೇಳಬೇಕಾದ ಮಾತುಗಳವು. ನಾಳೆ ಹೇಗೂ ನಿಮ್ಮಲ್ಲಿಗೆ ಬಂದೇ ಬರುತೇವಲ್ಲ. ನೀವು ಮಾತ್ರ ನಮ್ಮ ಆಗಮನದ ವಾರ್ತೆಯನ್ನು ಮಾಧುವಿಗೆ ತಿಳಿಸಬೇಡಿರಿ. ಆತನ ಕರ್ತವ್ಯಗಳ ಯಥಾ ವತ್ತಾದ ಸ್ವರೂಪ ರಾಯರ ಕಣ್ಣಿಗೇ ಬೀಳಲಿ. ಅದು ಹೇಗೆ ಅವರ ಹೃದಯ ಪರಿವರ್ತನೆಯಾಗುವದಿಲ್ಲವೋ ನೋಡೋಣ. (ನಗುತ್ತ) ಏನಮಾ ಲಕ್ಷ್ಮೀSSS , ನಿನ್ನ ಅಣ್ಣನನ್ನು ಮರತೇ ಬಿಟ್ಟಿಯೋ ಏನೋ ! ಆರೋಗ್ಯ ದಿಂದ ಇದ್ದೀಯಾ ?

ಲಕ್ಷ್ಮೀ : ನಿಮ್ಮ ತಂಗಿ ಅಂದರೂ ಸರಿಯೇ, ಮಗಳು ಅಂದರೂ ಸರಿಯೇ. ನಿಮ್ಮಿಂದಲೇ ನಾನು ಹೊಸಜನ್ಮವನ್ನು ಕಂಡೆ.

**ಡಾಕ್ಟರ** : ಸಂತೋಷ ! ದಿನಾಲು ಈ ತಿರುಗಾಟವನ್ನು ಮಾತ್ರ ತಪ್ಪಿಸಬೇಡ. ( ಲಕ್ಷ್ಮಿ ಕೃತಜ್ಞತೆಯಿಂದ ಕೈ ಮುಗಿಯುವಳು. ) ದೀಕ್ಷಿತರೇ ನಡೆಯಿರಿನ್ನು.

( ಅವರೆಲ್ಲರೂ ಹನುಮಂತಪ್ಪನಿಗೆ ನಮಸ್ಕರಿಸಿ ಹೋಗುವರು. )

**ಲಕ್ಷ್ಮೀ** : ಹನುಮಂತಪ್ಪಾ, ಜಾದೂ ಕಟ್ಟಿಗೆ ತಿರುವಿದಂತೆ, ಎಂತಹ ಮಾರ್ಪಾಟಾಯಿತಲ್ಲ, ಈ ನಂಜಿ ಹೊತ್ತಿನಲ್ಲಿ !

**ಹನುಮಂತಪ್ಪ** : ಕಾಲ ಎಲ್ಲವನ್ನೂ ಸರಿಪಡಿಸುತದೆ; ನಾವು ತಾಳ್ಮೆ ಯಿಂದಿರಬೇಕು. ಇದೆಲ್ಲ ಮಹಾತ್ಮರ ತಪಸ್ಸಿನ ಫಲ.

**ಲಕ್ಷ್ಮೀ** : ಹೋಗೋಣವೆ ಇನ್ನು ? ಹೊತ್ತಾಯಿತು.

**ಹನುಮಂತಪ್ಪ** : ( ನಗುತ್ತ ) ಭಾಗ್ಯದ ಲಕ್ಷ್ಮೀ ಬಾರಮ್ಮಾ, ನೀ ಸೌಭಾಗ್ಯದ ಲಕ್ಷ್ಮಿ ಬಾರಮ್ಮ ( ಎಂದು ಹೇಳುತ್ತ ಮುಂದೆ ಸಾಗುವ; ಲಕ್ಷ್ಮಿ ಒಯ್ಯಾರದಿಂದ ಹಿಂದೆ ಹೋಗುವಳು. )

## ಪ್ರವೇಶ ೨

**ಸನ್ನಿವೇಶ** : ಶ್ರೀನಿವಾಸರಾಯರ ದಿವಾನಖಾನೆಯ ಮುಂಭಾಗ. (ಮಹಾಲುಪರದೆ) ರಾಯರು ವಿಚಾರಮಾಡುತ್ತ ಶತಪಥ ತಿರುಗುತ್ತಿದ್ದಾರೆ. ಆಗಾಗ ಆತ್ಮಗತವೆನುವಂತೆ ಮಾತು ಸಾಗುತ್ತಿವೆ.

**ಶ್ರೀನಿವಾಸ** : ಮಾಧು ಮನೆಬಿಟ್ಟು ಹೋಗಿ ಆಯ್ದಾರು ತಿಂಗಳಾ ದವು. ಇಷ್ಟರಲ್ಲಿಯೇ ಹರಿಜನರನ್ನು ಅನೇಕರೀತಿಯಿಂದ ಉದ್ಧಾರ ಮಾಡಿ ದ್ದಾನೆ, ಅಂತ ಹೇಳುತಾರೆ ಜನ. ಪತಿತರನ್ನು ಪಾವನ ಮಾಡೋದೇ **ಧರ್ಮದ ಮುಖ್ಯ ಲಕ್ಷಣ!** ಎಂದಮೇಲೆ, ಮಾಧು ನಿಜಕ್ಕೂ ಒಬ್ಬ ಧರ್ಮಾ ವತಾರಿಯೇ ಎಂದು ಹೇಳಬೇಕಾಗತದೆ, ಆದರೆ—?

ಚಾಂಡಾಲ ಶ್ವಪಚಾನಾಂ ತು । ಬಹಿರ್ಗ್ರಾಮಾತ್ ಪ್ರತಿಶ್ರಯಃ ।

ಚಾಂಡಾಲ ಶ್ವಪಚರನ್ನು ಊರಹೊರಗೆ ಇಡಬೇಕೆಂದು ಮನು ಮಹರ್ಷಿ ಹೇಳುತಾನೆ. ಮುಂದೆ ಅದೇ ಸ್ಮೃತಿಯಲ್ಲಿಯೇ:

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ । ತ್ರಯೋ ವರ್ಣಾ ದ್ವಿಜಾತಯಃ
ಚತುರ್ಥ ಏಕ ಜಾತಿಸ್ತು । ಶೂದ್ರೋ, ನಾಸ್ತಿತು ಪಂಚಮಃ ॥

ಈ ಸೂತ್ರದಲ್ಲಿ, ಚಾಂಡಾಲ, ಶ್ವಪಚ ಮುಂತಾಗಿ ಪಂಚಮವರ್ಣವನ್ನು ಅಲ್ಲಗಳೆಯಲಾಗಿದೆ. ಈ ಪರಸ್ಪರ ವಿರೋಧ ಸೂತ್ರಗಳಿಗೆ ಕಾರಣವೇನು? ಒಬ್ಬರೇ ಮನುಮಹರ್ಷಿ ಈ ಎರಡೂ ವಚನಗಳನ್ನು ಹೇಳಿರಲಾರರು. ಯಾರೋ ಸ್ವಾರ್ಥಿಗಳೂ ಪ್ರತಿಷ್ಠಾ ಪ್ರಿಯರೂ, 'ಅಸ್ಪೃಶ್ಯರನ್ನು ಊರ ಹೊರಗಿಡಬೇಕು' ಎಂದು ಸ್ಮೃತಿಯಲ್ಲಿ ಸೇರಿಸಿರಬೇಕು; ಅದನ್ನೇ ಜನರು ರೂಢಿಯಲ್ಲಿ ತಂದಿರಬೇಕು. ಈ ರೂಢಿಯನ್ನೇ ನಾನು ನಿಜಧರ್ಮವೆಂದು ನಂಬಿದೆನೇ? ಈ ರೂಢಿ ಧರ್ಮದಲ್ಲಿ ದೀನ ದಲಿತರ ಬಗೆಗೆ ದಯೆ ಇದೆಯೇ? ಇಲ್ಲವೆಂದೇ ಅಲ್ಲವೇ, ಪತಿತೋದ್ಧಾರ ಕಾರ್ಯವನ್ನು ಕೈಕೊಂಡ ಸಾಧುವನ್ನು ನಾನು ಮನೆ ಬಿಡಿಸಿದ್ದು? ಎಂದಮೇಲೆ, ದಯೆಯಿಲ್ಲದ ನನ್ನ ಹೃದಯದಲ್ಲಿ ದೇವರು ಇದ್ದಾನೆಯೇ?...... ( ತೆರೆಯಲ್ಲಿ— ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲಸಂಗಮದೇವ— ಎಂಬ ಪಲ್ಲವಿ ಕೇಳುವುದು ) ( ರಾಯರು ಚಕಿತರಾಗಿ ಅತ್ತಕಡೆಗೇನೋಡುತ್ತ ) ಏನಿದು? ನನ್ನ ಪ್ರಶ್ನೆಗೆ ಆಕಾಶವಾಣಿ ಉತ್ತರವನ್ನು ಕೊಟ್ಟಿತೇ? ( ಮತ್ತೆ ತೆರೆಯಲ್ಲಿ— ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ? ಪದ ) ( ರಾಯ ಉತ್ತೇಜಿತನಾಗಿ ) ಬಾ, ಬಾ, ದೇವದೂತಾ, ನನ್ನ ಪ್ರಶ್ನೆಯೂ ಇದೇ. ಬಾ ಮುಂದೆ. ಕಣ್ಣಿದ್ದೂ ಕುರುಡನಾದ ನನಗೆ ದಿವ್ಯತೇಜಸ್ಸನ್ನು ತೋರು ಬಾ, ಸತ್ಯ ಸಂದೇಶವನ್ನು ಬೀರು ಬಾ; ಬಾ ಒಳಗೆ.... ( ದಾಸಯ್ಯ ಒಳಗೆ ಬರುವ ) ಹೇಳು, ಈಗ ಹೇಳಿದ ಪದವನ್ನೇ ಮತ್ತೆ ಹೇಳು.

**ದಾಸಯ್ಯ :** ಹಾಡು,          ರಾಗ.          ತಾಳ.

ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೊ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ ।
ಮನೆಯೊಳಗೆ ಮನೆಯೊಡೆಯ ನಿದ್ದಾನೋ ಇಲ್ಲವೋ ॥
ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ ।
ಮನೆಯೊಳಗೆ ಮನೆಯೊಡೆಯನಿಲ್ಲ, ಕೂಡಲಸಂಗಮದೇವಾ ॥

ಶ್ರೀನಿವಾಸ : ( ಗಾಳಿ ತುಂಬಿದವನಂತೆ ) ನಿಜ ನಿಜ; ನನ್ನ ಮನ ದೊಳಗೆ ಮಸಿಯೊಡೆಯನಿಲ್ಲ. ರೂಢಿಯ ಮೂಢಧರ್ಮದ ನನ್ನ ದೇಹದಲ್ಲಿ, ಹುಸಿ ತುಂಬಿದೆ; ಕೀರ್ತಿಕಾಮುಕನಾಗಿ ಸಮಾಜಸೇವೆಯ ನೋಗು ಹಾಕಿದ ನನ್ನ ಮನಸ್ಸಿನಲ್ಲಿ ವಿಷಯ ತುಂಬಿದೆ. ಇಂಥ ಅಪವಿತ್ರ ದೇಹದಲ್ಲಿ ಮಲಿನವಾದ ಮನಸ್ಸಿನಲ್ಲಿ ಮಸಿಯೊಡೆಯನಿಲ್ಲ, ಇಲ್ಲ, ಇಲ್ಲ! ರಮಾ ರಮಾ.

ರಮಾದೇವಿ : (ಬಂದು) ಮತ್ತೇನು ಗಡಬಿಡಿ? ಇಲೆಕ್ಶನ್ ಕ್ಯಾನ್ವಾಸಿಗೆ ಹೋಗೋ ಹೊತ್ತಾಯ್ತೇನೋ? ಯಾಕೋ ಬಂದಿಲ್ಲಲ್ಲ, ಆ ತ್ರಿಮೂರ್ತಿಗಳು?

ಶ್ರೀನಿವಾಸ : ( ಅದೇ ಉತ್ತೇಜನದಲ್ಲಿಯೇ ) ನನ್ನ ಇಲೆಕ್ಶನ್ನು! ನನ್ನ ಇಲೆಕ್ಶನ್ನು! ಸತ್ಯಧರ್ಮ-ರೂಢಿಧರ್ಮಗಳ ಹೋರಾಟದ ಇಲೆಕ್ಶನ್ನಿನಲ್ಲಿ ಸತ್ಯ ಧರ್ಮಕ್ಕೇ ಜಯವನ್ನು ತೋರಿಸ ಮಹಾ ಪುರುಷ—ಇದೋ ಈತ! ರಮಾ ಹೋಗು, ನನ್ನ ಪರ್ಸ (Purse) ತೆಗೆದುಕೊಂಡು ಬಾ. ರಮಾದೇವಿ ಪರ್ಸ ತರುವಳು. ರಾಯರು ಅದರೊಳಗಿಂದ ೫ ರೂ. ಗಳ ನೋಟು ತಕ್ಕೊಂಡು ) ತೆಗೆದುಕೋ ಈ ನೋಟನ್ನು! ( ಎಂದು ಕೈ ಮುಂದೆ ಮಾಡುವರು. )

ದಾಸಯ್ಯ : (ಹಿಂಜರಿಯುತ್ತ) ದ್ಯಾವ್ರೂ, ಕಾಸೆಳ್ದು ಕಾಸಿಗೆ ಕೈ ಒಡ್ಡೋ ಬಡ ದಾಸಯ್ಯನ ಹತ್ರಾ, ಈಟೆಲ್ಲಿ ಬರಬೇಕ್ರಿ, ಚಿಲ್ಲರಾSS?

ಶ್ರೀನಿವಾಸ : ನನಗೂ ಬೇಕಾಗಿಲ್ಲ ಚಿಲ್ಲರಾ! ನೀನು ದಾಸನಲ್ಲ, ಮಹೇಶ. ನನ್ನ ಕುರುಡುತನವನ್ನು ಕಳೆದು ದಿವ್ಯ ದೃಷ್ಟಿಯನ್ನು ನೀಡಿದ ಅಶ್ವಿನೀ ದೇವತೆ; ಮಹಾಶಸ್ತ್ರವೈದ್ಯ ಧನ್ವಂತರಿ ನೀನು. ನೀನು ಕೊಟ್ಟ ನೋಟಕ್ಕೆ, ನಾನು ಕೊಡುವ ಈ ನೋಟು (Note) ತಕ್ಕ ಪ್ರತಿಫಲವಲ್ಲ; ಆದರೂ...ಆದರೂ...(ಕೃತಜ್ಞತೆಯ ದನಿಯಿಂದ) ಈ ಬಡ ಕಾಣಿಕೆಯನ್ನು ಸ್ವೀಕರಿಸು ನನ್ನಪ್ಪಾSS. ( ಎಂದು ಕೊಡಲು ಮುಂದೆ ಹೋಗುವನು, ದಾಸಯ್ಯ ಹಿಂಜರಿಯುತ್ತಾನೆ. )

ರಮಾ : ತಗೋ ತಗೋ, ಕೈಗೆ ಬಂದ ಕಾಂಚನ ಲಕ್ಷ್ಮಿಯನ್ನು ಬಿಡಬಾರದು. ಭಾಗ್ಯದ ಲಕ್ಷ್ಮೀ ಬಾರಮ್ಮಾ ಎಂದು ಹಾಡುತ್ತ ಹೋಗು. (ದಾಸಯ್ಯ ಭಾಗ್ಯದ ಲಕ್ಷ್ಮೀ ಬಾರಮ್ಮಾ ಎಂದು ಹಾಡುತ್ತ ಹೋಗುವ.) (ಗಂಡನಿಗೆ) ಏನು, ಇದ್ದಕ್ಕಿದ್ದ ಹಾಗೆಯೇ ಬದಲಾಗಿ ಬಿಟ್ಟಿರಲ್ಲ! ಇನ್ನಾದರೂ ಮಗನ ಮೇಲೆ ದಯಾ ತೋರಿಸತೀರಾ?

ಶ್ರೀನಿವಾಸ : ದಯಾ? ಅವನೇ ನನ್ನ ಮೇಲೆ ದಯಾ ತೋರಿಸಬೇಕು. ದೇವಧರ್ಮಗಳ ತಿರುಳು ತಿಳಿಯದೆ ಆ ಸತ್ಯಶೀಲನಿಗೆ ನಿಷ್ಕಾರಣವಾಗಿ ತೊಂದರೆಯನ್ನು ಕೊಟ್ಟೆ. ಈ ಇಲೆಕ್ಶನ್ನಿನ ಹುಚ್ಚು ಹಂಬಲಕ್ಕೆ ಬಿದ್ದು ಮಗನೆಂಬ ಮಮತೆಯನ್ನೂ ಮರೆತುಬಿಟ್ಟೆ. ಇಂಥ ಪಾಪಿಯನ್ನು ಆ ಪುಣ್ಯಾತ್ಮನೇ ಪಾವನ ಮಾಡಬೇಕು. ಅವನ ನಮಾಚಾರ-ದುರಗಪ್ಪಾ೭ss.

ದುರುಗ : (ತಕಲಿಯ ಮೇಲೆ ನೂಲುತ್ತ ಬಂದು) ಯಾಕ್ರೀ ದಣೇರೀ, ದುರುಗಪ್ಪ ಅಂತೀರಿ? ನಿಮ್ಮಂತಾ ದೊಡ್ಡೋರು, ದುರುಗಾ ಅಂದ್ರೇ ನಮಗೆ ಸಮಾಧಾನ.

ಶ್ರೀನಿವಾಸ : ದೊಡ್ಡವರು ? ಇರಲಿ. ಈ ತಕಲೀ ತಿರುವೋದು ಯಾವಾಗ ಕಲಿತಿ ?

ದುರುಗ : ದಣೇರೀ, ಈಟು ದಿನಾ ಬಾಯಿ ಬಿಡಾಕ ಹೆದರಿಕೆ ಬರತಿತ್ರಿ. ಈಗ ಇದ್ದದ್ದೆಲ್ಲಾನೂ ಹೇಳಿ ಬಿಡತೇನಿ ನಮ್ಮ ಮಾದೂರಾಯ್ರು ಅಂದ್ರ ದೇವ್ರsss ನಮ್ಮ ಕೇರ್ಯಾಗ ಇಳದಾಂಗ ಆಗೇತಿ. ಎಲ್ಲಾ ಕಡಿಂದಾನೂ ನಮ್ಮ ಸುದಾರಣೀ ಮಾಡಾಕ ಹತ್ಯಾರ.

ಶ್ರೀನಿವಾಸ : (ಕುತೂಹಲದಿಂದ) ಏನೇನು ಮಾಡತಿದ್ದಾನೋ?

ದುರುಗ : ಯಾವದಂತ s ಹೇಳಬೇಕ್ರೀ ! ನಮ್ಮ ಕೇರೀ ಹತ್ರಾ ಶಿಬುರು (ಶಿಬಿರ) ಅಂತ ಮಾಡಿಕೊಂಡಾರಲ್ರೀ... ಅಲ್ಲಿ ದಿನಾಲು ನಮ್ಮ ಜನರಿಗೆ ನೂಲೋದು ಕಲಿಸ್ತಾರ. ನಮಗ ರಾಟ ತಂದು ಕೊಟ್ಟಾರ; ಹಂಜಿ ತಂದು ಕೊಡತಾರ; ನಾವು ನೂತನೂಲು ತಾವೇ ಒಯ್ದು ಮಾರಿ, ಕೆಲಸಕ್ಕ ಹಂಜಿ, ಉಳಿದ ರೊಕ್ಕ ತಂದು ಕೊಡತಾರ. ಗಂಡಸರಿಗೆ ಖಾದಿ ಅಂಗಿ-ಚೊಣ್ಣ ತೊಡಾಕ ಹಚ್ಯಾರ; ಹೆಂಗಸರಿಗೆ ಖಾದೀ ಸೀರೀ ಉಡಾಕ ಹೇಳ್ಯಾರ.

( ತೆರೆಯಲ್ಲಿ. Flash back — **ಹರಿಜನ :** ರಾಯ್ರೇ, ಹಂಜಿ ಇಲ್ಲಲ್ರೀ ನೂಲಾಕ ?

**ಮಾಧವ :** ನಾಳೆ ತರಿಸಿ ಕೊಡತೇನಿ. ಭೀಮಣ್ಣಾ, ನೂಲು ಇನ್ನಷ್ಟು ಜಿನುಗು ಆಗಬೇಕು. ಇಲ್ಲದಿದ್ರೆ, ನೇಯೋ ಮುಂದೆ ಎಳೆ ಪಿಸೀತದೆ. )

**ದುರುಗ :** ಮತ್ತs ಎಲ್ಲಾರ ಮೈಮ್ಯಾಗೂ ಜಳಾ ಜಳಾ ಅರಿಬಿ ಇರಬೇಕು, ಅಂತಾ ಕಟ್ಟು ನಿಟ್ಟು ಅಪ್ಪಣಿ ಮಾಡಿಬಿಟ್ಟಾರ್ರೀ.

(ತೆರೆಯಲ್ಲಿ—Flash back— **ಮಾಧವ :** ಭರಮಣ್ಣಾ, ಮೈ ಮೇಲಿನ ಬಟ್ಟಿ ಎಷ್ಟು ಕೊಳಕಾಗೇದಲ್ಲಾ; ಯಾಕೆ ?

**ಬರಮಣ್ಣ :** ಸಬಕಾರ ಇದ್ದಿದ್ದಿಲ್ರೀss. ಮತ್ತ ಮೈಯಾಗೂ ಒಂದೀಟು...

**ಮಾಧವ :** ನನಗೆ ಗೊತ್ತು ಇದೆಲ್ಲ. ಮೈ ಬಗ್ಗಿಸಿ ದುಡೀಲಾರಿ. ಸಬಕಾರ ಕೊಡತೇನಿ; ನೀನೇ ಒಕ್ಕೊಂತೀಯೋ ಸ್ವಯಂ ಸೇವಕರಿಗೆ ಹೇಳಬೇಕೋ ಒಗೀಲಿಕ್ಕೆ?

**ಬರಮಣ್ಣ :** ಬ್ಯಾಡ್ರಿ ಯಪಾ, ಮದ್ಯಾಣಕ ನಾನೇ ಜಳಾಜಳಾ ಮಾಡಿಕೋತೇನಿ. )

**ದುರುಗ :** ಮತ್ತ ಆ ನನ್ನ ತಾಯಿ ಸೀತವ್ವೋರು ಮನಿ ಮನೀಗೆ ಬಂದು, ಒಳಗs ಹೊರಗs ಎಲ್ಲಾ ಕಡಿಗೂ ಜಳಾಜಳಾ ಇಡಾಕ ಕಲಿಸ್ಯಾರ ನಮ್ಮ ಹೆಂಗ್ಸೂರಿಗೆ. ನಮ್ಮ ಮಕ್ಕಳ್ನಂತೂ ಹೊಟ್ಟೀಮಕ್ಕಿಗಿಂತ ಬಲಾ ನೋಡಿಕೋಂತಾರ.

(ತೆರೆಯಲ್ಲಿ—Flash back— **ಸೀತಕ್ಕ :** ಗಂಗೂ, ಹೆಳ್ಳು ಹಾಕಿಸಿ ಗೊಂಡಿಲ್ಲಲ್ಲ; ಯಾಕೆ ?

**ಗಂಗು :** ನಮ್ಮವ್ವ ಅವಸರದ್ಲೇ ಕಟಿಗೀ ತರಾಕ ಹೋಗ್ಯಾಳ್ರಿss.

**ಸೀತಕ್ಕ :** ನನ್ನ ಹತ್ತರಾ ಬರಬೇಕಾಗಿತ್ತು ! ಬಾ ಇಲ್ಲಿ, ಹೆಳ್ಳು ಹಾಕತೇನಿ. )

**ಶ್ರೀನಿವಾಸ** : ಮತ್ತೆ, ಓದೋದಕ್ಕ ಽ ಽ ಬರಿಯೋದಕ್ಕ ಽ ಏನರೆ ಕಲಿಸತಾರೇನು ?

**ದುರುಗ** : ಅದನ್ನೂ ಸುರೂ ಮಾಡ್ಯಾರ್ರೀ. ಆದರ, ನಮ್ಮ ಜನಾ ಮಡ್ಡ ತಲೀವು, ಕುಂಟಿಗೋ ಕೂರಿಗೋ ಅಂತ, ತೆಪಿಗೋಂತ ತಡವಿ ಕೋಂತ ಓದತಾವ.

(ತೆರೆಯಲ್ಲಿ—Flash back—**ಮಾಧವ**: ಗುಡ್ಡಪ್ಪ, ನೀ ಓದು.

**ಗುಡ್ಡಪ್ಪ** : ನಾವು ದಿನಾಲು ಸಾಲೆ...ಗೆಬರಬೇಕು.

**ಮಾಧವ** : ಗೆಬರಬೇಕು, ಅನ್ನಬಾರದಪಾ. ಸಾಲೆಗೆ ಬರಬೇಕು, ಅನ್ನು. ಚಿನ್ನಪ್ಪಾ ನೀ ಒಂದು ವಚನಽ ಹೇಳು.

**ಚಿನ್ನಪ್ಪ** ತಂದೆ ನೀನು, ತಾಯಿ ನೀನು, ಬಂದು ನೀನು ಹೋಗು ನೀನು.

**ಮಾಧವ** : ಮುಂಗಾಲು ಪುಟಿಗಿ ಹೊಡೀಬಾರದು ಹಾಂಗ ಽ ! ಬಂಧು ನೀನು, ಬಳಗ ನೀನು-ಅಂತ ಹೇಳು.)

**ಶ್ರೀನಿವಾಸ** : ( ನಗುತ್ತ ) ಸಜ್ಜಾಗಿ ನಾಗೇದಲ್ಲ ಸಾಲೆ ! ಹೀಂಗ ಕಲಿತರ ಬುದ್ಧಿ ಹ್ಯಾಂಗ ಬರಬೇಕಪಾ ?

**ದುರುಗ** : ಅದರ ದೆಸಿಂದ ಽ ಚೆಂಜೀ ಕಡೀಗೆ ದುರುಗವ್ವ ನಗುಡೀ ಮುಂದ ಎಲ್ಲಾರನೂ ಕೂಡಸತಾರ್ರೀ; ಪ್ಯಾರ್ತಣಾ (ಪ್ರಾರ್ಥನೆ) ಮಾಡಿಸಿ ಎಲ್ಲಾರಿಗೂ ಬುದ್ಧೀ ಮಾತು ಹೇಳ್ತಾರ.

(ತೆರೆಯಲ್ಲಿ—Flash back— **ಮಾಧವ** : ಹರಿಜನ ಬಾಂಧವರೀ, ನಿಮ್ಮ ಸಮಾಜ ವಿದ್ಯಾ ಬುದ್ಧಿ, ನಡೆ-ನುಡಿ ಎಲ್ಲರೀತಿಯಿಂದಲೂ ಹಿಂದು ಳಿದ್ಽದ. ಇದನ್ನೆಲ್ಲ ತಿದ್ದಿಕೊಳ್ಳದಿದ್ದರೆ ಯಾರೂ ನಿಮ್ಮನ್ನು ಮುಟ್ಟೋದಿಲ್ಲ; ಸಮೀಪಕ್ಕ ಸುದ್ಧಾ ಹಾಯಗೊಡೋದಿಲ್ಲ. ಹೀಗಿದ್ದಾಗ, ಒಬ್ಬಿಬ್ಬರು ಸುಧಾ ರಿಸಿದರೂ ಉಪಯೋಗ ಇಲ್ಲ. **ಬೇಡೋದನಿಯೊಳಗೆ ಬಲ ಽ ಇಲ್ಲ ದಿದ್ದರೆ ನೀಡೋ ಕೈ ಸಡಿಲಾಗೋದಿಲ್ಲ !** ನಿಮ್ಮಲ್ಲಿ ಅಷ್ಟು ಬಲಽ ಎಲ್ಲಿದೆ ಈಗ ? ನಿಮ್ಮ ನಿಮ್ಮೊಳಗೇ ಹೊಲೆಯರು, ಮಾದಿಗರು, ಚಲ

ವಾದಿಗಳು, ಘೋರರು, ಮೇದಾರರು, ಮೊಚ್ಚೆಗಾರರು ಅಂತಾ ಬೇರೆ ಬೇರೆ ಗುಂಪು ಮಾಡಿಕೊಂಡೀರಿ; ನಾ ಹೆಚ್ಚು ನೀ ಹೆಚ್ಚು ಅಂತ ಬಡಿದಾಡ ತೀರಿ. ನೀವೇ ನಿಮ್ಮವರನ್ನು ಮುಟ್ಟದಿದ್ದರೆ, ಊರಜನರು ನಿಮ್ಮನ್ನು ಹೇಗೆ ಮುಟ್ಟತಾರೆ ? ನಿಮ್ಮ ನಿಮ್ಮೊಳಗಿನ ಭೇದ ಭಾವ ಬಿಡಿರಿ; ಎಲ್ಲರೂ ಸರಿ ಸಮಾನ ಅಂತ ತಿಳಕೊಂಡು ಒಟ್ಟಾಗಿ ನಡೀರಿ. ಹಾಗಾದಮೇಲೆ, ನಮ್ಮನ್ನು ಯಾಕೆ ಮುಟ್ಟೋದಿಲ್ಲ, ಅಂತ ಊರವರನ್ನು ಮುಂಗೈ ಹಿಡಿದು ಕೇಳೋ ಬಲ ನಿಮ್ಮಲ್ಲಿ ಬರತದೆ. ಎಲ್ಲರೂ ಕೂಡಿ ಬಾಳಿ, ಬೆಳೆಯಿರಿ. ಜಯಹಿಂದ !)

**ರಮಾದೇವಿ** ಕೇಳಿದಿರೋ ಇಲೆಲ್ಲೀ, ಮಗ ಮಾಡಿದ ಮಹತ್ಕಾರ್ಯದ ವರದಿ ? ...ನ್ನಾರೆ ನಿಮ್ಮ ದೇವರು ಧರ್ಮಗಳ ಹುಚ್ಚು ಹಂಬಲ ಬಿಡತೀರಾ ?

**ಶ್ರೀನಿವಾಸ :** ನಿಜಕ್ಕೂ ರಮಾ, ಅಂಥಾ ಪುಣ್ಯಾತ್ಮನನ್ನು ಹೆತ್ತ ನಿನ್ನ ಒಡಲು ಧನ್ಯವಾಯಿತು. ನೀನೂ ಮಾಧೂನ ಹತ್ತರ ಬರೋದಾದರೆ......
(ಅಷ್ಟರಲ್ಲಿ ತ್ರಿಮೂರ್ತಿಗಳೂ ಡಾಕ್ಟರರೂ ಬರುವರು. ದೀಕ್ಷಿತ ದುರುಗಪ್ಪನನ್ನು ತಾಕುತ್ತಲೇ ರಂಗದ ಮೇಲೆ ಬರುವ.)

**ದುರುಗ :** ಯಪಾ ಶಂಕ್ರಪ್ನೋರೇ, ಹೊಲ್ಯಾನ್ನ ಮುಟ್ಟಿದಿರೀಽಽಽ!

**ಶಂಕರ :** ( ನಗುತ್ತ ) ಹುಚ್ಚನ್ನ ತಂದು ! ಹೊಲ್ಯಾರಂದ್ರ ಮನುಷ್ಯರಲ್ಲೇನು ?

**ವಿರೂಪಾಕ್ಷಯ್ಯ :** ಹೊಲ್ಯಾರು ಸತ್ತ ಇಪ್ಪತ್ತು ವರ್ಷ ಆಯ್ತು. ಈಗಿರೋರು ಹರಿಜನರು, ಹರಿಭಕ್ತರು, ದೇವರ ಮನುಷ್ಯರು...... !

**ಕಾಳಾಚಾರಿ :** ಮಾಧೂರಾಯನ ಕುಲಿಮಿಯೊಳಗೆ, ತೇಜಾಪ ಹಾಕಿದ ಬಂಗಾರ ಆಗೀದಾರೆ ಈಗ ಹರಿಜನರು.

**ಶ್ರೀನಿವಾಸ :** ( ಆನಂದದಿಂದ ) ಬರ್ರಿ ಬರ್ರಿ. ದೀಕ್ಷಿತರೇ, ಈ ಹೊತ್ತು ಇಲೆಕ್ಷನ್ ಕ್ಯಾನ್ವಾಸಿಗೆ ಹೋಗೋದು ಬೇಡ. ಈ ದುರುಗಪ್ಪನ ಮಾತು ಕೇಳಿಕೇಳಿದಂತೆ, ಮಾಧೂನ್ನ ಪ್ರತ್ಯಕ್ಷವಾಗಿ ನೋಡಬೇಕೂ ಅಂತ ಮನಸ್ಸು ಹರೀತದೆ.

**ಶಂಕರ:** ಶುಭಲಕ್ಷಣ. ನಿಮ್ಮಂಥ ಪ್ರಭಾವ ಶಾಲಿ ಶ್ರೀಮಂತರು ಹರಿಜನೋದ್ಧಾರಕ್ಕೆ ತೊಡಗಿದರೆ, ಆರುವರ್ಷಗಳಲ್ಲಿ ಆಗೋಅಷ್ಟು ಕೆಲಸ ಆರೇ ತಿಂಗಳಲ್ಲಿ ಆಗತದೆ.

**ರಮಾದೇವಿ:** ಅವರೇನೋ ತೊಡಗಬಹುದು. ಆದರೆ ಅದಕ್ಕ ನಿಮ್ಮಂಥ ಸದ್ಗೃಹಸ್ಥರ ಬೆಂಬಲ ಬೇಕಲ್ಲ! ಊರವರು ವಿರೋಧ ಮಾಡಿದರೆ......

**ಕಾಳಾಚಾರಿ:** ನಮ್ಮ ಬಗ್ಗೆ ನಿಮಗೆ ಸಂಶಯ ಬೇಡ. ಮಾಧವರಾಯರ ದೊಡ್ಡ ಮನಸ್ಸು ನಮ್ಮ ಕೀಟಕತನವನ್ನು ಕಳೆದು ಬಿಟ್ಟದ. ಆತ ನಿಜವಾಗಿಯೂ ಮಹಾ ಪುರುಷ ಅಂತ ನಮಗೂ ಅನಿಸೇದ. ನಿಮಗೆ, ಮಗ ಅನ್ನೋ ಮಮತೆ ಅತ್ತ ಎಳೀತಿರಬಹುದು; ಆದರೆ, ನಮಗೆ ಎಲ್ಲರಿಗೂ ಅವನೊಬ್ಬ ಮಹಾಪುರುಷ ಅಂತ ಮನವರಿಕೆ ಆಗೇದ. ಒಳ್ಳೇದು ರಾಯರೇ, ಮಾಧೂರಾಯರ ಹತ್ತರ ಯಾವಾಗ ಹೋಗೋಣ ?

**ಡಾಕ್ಟರ:** ಶುಭಸ್ಯ ಶೀಘ್ರಂ! ಒಳ್ಳೇ ಕಾರ‍್ಯಕ್ಕೆ ಕಾಲಹರಣ ಯಾಕೆ?

**ಶಂಕರ:** ಹೌದು ಹೌದು. ನಾವು ಅಲ್ಲಿಗೆ ಬೇಗನೆ ಬರತೇವಿ ಅಂತ ದುರುಗಪ್ಪನ ಕಡೆಯಿಂದ ಮುಂದಾಗಿಯೇ ಹೇಳಿ ಕಳಿಸೋಣಲ್ಲ ?

**ಡಾಕ್ಟರ:** ಬೇಡ ಬೇಡ. ಸಹೃದಯನಾದ ಸಮಾಜ ಸೇವಕನ ಸ್ವಾರ್ಥರಹಿತ ಸೇವೆಯು ಸತ್ಯಸ್ವರೂಪವೇ ಸಾಮಾಜಿಕರನ್ನು ಸಂತಯಿಸಬೇಕು. ಅದಕ್ಕಾಗಿ ಆತನಿಗೆ ನಾವು ಏನನ್ನೂ ಮುಂಗಡವಾಗಿ ತಿಳಿಸಬಾರದು. ಅಲ್ಲವೇ ರಾಯರೇ ?

**ಶ್ರೀನಿವಾಸ:** ಸತ್ಯವನ್ನೇ ಹೇಳಿದಿರಿ. ಇದರಿಂದ ಮಾಧುವಿನ ಮಹತ್ತ್ವವೂ ಬೆಳೀತದೆ; ಮತ್ತು ಮಗನ ಮೇಲಿನ ಮೋಹಕ್ಕಾಗಿ ತಂದೆ ಈ ಮಹಾಕಾರ‍್ಯಕ್ಕೆ ಬೆಂಬಲವನ್ನು ಕೊಟ್ಟ, ಎಂಬ ಅಪವಾದದಿಂದ ನಾನೂ ದೂರಾಗತೇನಿ. ಅಲ್ಲವೇ ಸ್ವಾಮಿಗಳೇ ?

**ವಿರೂಪಾಕ್ಷಯ್ಯ:** ಒಪ್ಪಿದೆ. ಮಾಧವರಾಯರ ಸಹೃದಯತೆಯೇ ಬೀಗದ ಕೈಯಾಗಿ, ಸಾರ್ವಜನಿಕರ ಹೃದಯ ಕವಾಟದ ಬೀಗವನ್ನು ತೆರೆಯಲಿ; ಅದರೊಳಗೆ ಹರಿಜನರಿಗೆ ಪ್ರವೇಶವನ್ನು ಕೊಡಿಸಲಿ.

ಕಾಳಾಚಾರಿ : ಮಾಧವರಾಯರು ನೂರು ನಂಬರಿನ ಚೊಕ್ಕ ಚಿನ್ನದ ಗಟ್ಟಿ ಇದ್ದಾಂಗ ಇದ್ದಾರೆ ಅನ್ನೋದನ್ನ, ಪ್ರಸಂಗದ ಒರೆಗಲ್ಲಿನ ಮೇಲೆ ತಿಕ್ಕಿಯೇ ತೋರಿಸಬೇಕು. ಬರೀ ಬಾಯಿಂದ ಹೇಳಿ ಉಪಯೋಗವಿಲ್ಲ.

ಶ್ರೀನಿವಾಸ : ( ನಗುತ್ತ ) ರಮಾ... ನೀನೂ ಬರಬೇಕು ಮತ್ತೆ ! ನಡೆಯಿರಿ.

ಡಾಕ್ಟರ : ಹೂಂ, ಹೇಳಿರಿ—ಹರಿಜನೋದ್ಧಾರ...

ತ್ರಿಮೂರ್ತಿಗಳು : ಜಿಂದಾ ಬಾದ.

( ಮೂರುಸಲ ಘೋಷಣೆಮಾಡಿ ಎಲ್ಲರೂ ಹೋಗುವರು. )

## ಪ್ರವೇಶ ೩

ಸನ್ನಿವೇಶ : ಮಾಧವರಾಯನ ಶಿಬಿರ. ಒಬ್ಬಿಬ್ಬರು ಹರಿಜನರು ನೂಲನ್ನು ತೆಗೆಯುತ್ತಿದ್ದಾರೆ. ಲಕ್ಷ್ಮಿ ಚರಖಾ ತಿರುವುತ್ತಿದ್ದಾಳೆ, ಇಬ್ಬರು ಹರಿಜನರು ಪುಸ್ತಕಪಾಟಿಗಳನ್ನು ಹಿಡಿದಿದ್ದಾರೆ. ಸೀತಕ್ಕ ಹರಿಜನ ಹುಡುಗಿಗೆ ಹೆರಳು ಹಾಕುತ್ತಿದ್ದಾಳೆ. ಮಾಧವರಾಯ ಹನುಮಂತಪ್ಪ ಅತ್ತಿತ್ತ ಅಡ್ಡಾಡುತ್ತ ಮೇಲ್ವಿಚಾರಣೆ ಮಾಡುತ್ತಿದ್ದಾರೆ.

ಒಬ್ಬ ಹರಿಜನ -(ಓದುತ್ತ) ನಾವು ದಿನಾಲು ಸಾಲೆಗೆ ಬರುತ್ತೇವೆ. (ತಲೆಯನ್ನು ಕೊಡಹಿ) ಅಲ್ಲಲ್ಲ; ನಾಲೆಗೆ ಬರುತ್ತೇವೆ. ಕಮಲೆಯ ಗೆಳತಿ... ಯುಮನೆ....ಯಲ್ಲಿ

ಮಾಧವ : ( ನಗುತ್ತ ) ಏ ಹುಚ್ಚಪ್ಪಾ, ಯಮನೆ...ಯಲ್ಲಿ ಅನ್ನಬಾರದು; ಗೆಳತಿಯು ಮನೆಯಲ್ಲಿ ಅಂತ ಹೇಳು. ಭೀಮಣ್ಣಾ, ಮುಂದೆ ನೀ ಓದು.

ಭೀಮಣ್ಣ : ಗೆಳತಿಯ ಮನೆಯಲ್ಲಿ ಮುಂದೆ ನಾಯಿೂ ತಂದರೆ......

ಮಾಧವ : (ನಗುತ್ತ) ಅಲ್ಲಪಾ; ಮುಂದೇನಾಯಿತೆಂದರೆ ಅನಬೇಕು. ಭೀಮಣ್ಣ —ಮುಂದೇನಾಯಿತಂದರೆ ಅನಬೇಕು............

**ಹನುಮಂತಪ್ಪ** : ಮಹಾರಾಯಾ, ಅಕ್ಷರ ನೋಡಿಕೋತಾ ಸ್ವಲ್ಪ ಹೊತ್ತು ಮನಸಿನೊಳಗೇ ಓದಿಕೋ; ಆ ಮೇಲೆ ಗಟ್ಟಿಯಾಗಿ ಓದೀಯಂತೆ. (ಲಕ್ಷ್ಮಿಯ ಕಡೆಗೆನೋಡಿ) ಹಾಂ ಹಾಂ ಲಕ್ಷ್ಮೀ, ನೂಲು ತೆಗೆಯೋದು ಹಾಗಲ್ಲ. ಎಡಗೈಯನ್ನು ಬಿಗಿಯಾಗಿ ಮೇಲಕ್ಕೆತ್ತಿ ಬೆರಳುಗಳಲ್ಲಿ ದಾರವನ್ನು ಹಿಡಿದು.... ಛೇ ಛೇ ಛೇ ಛೇ ಹಾಗಲ್ಲ ತಾಯಿ ಸಾ ತೋರಿಸತೇನಿ ತಡೀಽಽ. (ಮುಂದೆಬರುವ).

**ಲಕ್ಷ್ಮೀ** : (ಮುಗುಳುನಗುತ್ತ) ನನಗೆಲ್ಲ ತಿಳೀತು ಬಿಡ್ರಿ, ನಾನೆಲ್ಲ ತೆಗೀತೇನಿ ನೂಲು.... (ಮಾಧವರಾಯ ಅವರಿಬ್ಬರನ್ನೂ ನೋಡಿ ಸಂತಸ ದಿಂದ ನಗುವ)

**ಸೀತಕ್ಕ** : ಗಂಗೂ ಆ ಕಡೆಗೆ ತಿರುಗು; ಹೆರಳಿಗೆ ಹೂ ಹಾಕತೇನಿ (ಅಭಿನಯ)

**ದುರುಗಪ್ಪ** : (ಧಾವಿಸಿ ಬಂದು) ಯಪಾ, ದೊಡ್ಡಪ್ಪಾರು ಬರ ತಾರ್ರೀಽಽ!

**ಶ್ರೀನಿವಾಸ** : (ಭಾವಾವೇಶದಿಂದಬಂದು) ಮಾಧೂ ಮಾಧೂ, ನಿನ್ನ ಮೂಢತಂದೆಯನ್ನು ಕ್ಷಮಿಸು ನನ್ನಪ್ಪಾ! (ಎಂದು ಮುಂದೆಯೂರುವ).

**ಮಾಧವ** : (ತಂದೆಯನ್ನು ಎತ್ತಿ) ಇದೇನು ಅಪಚಾರ ಅಪ್ಪಾಜೀ! ನಾನು ನಿಮ್ಮ ಚರಣ ಧೂಳಿಯಲ್ಲವೇ? ( ತಂದೆಯನ್ನು ವಂದಿಸುವನು)

**ಸೀತಕ್ಕ** : (ಎದ್ದು ಬಂದು ಅತ್ತೆ ಮಾವಂದಿರನ್ನು ವಂದಿಸುವಳು.)

**ರಮಾದೇವಿ** : (ಸೊಸೆಯನ್ನು ಬಿಗಿದಪ್ಪಿ) ಸತೀ ಸಾವಿತ್ರಿಯಂತೆ ಚಿರಮುತ್ತೈದೆಯಾಗು. ಸತೀಪತಿಗಳು ಚಿರಂಜೀವಿಗಳಾಗಿರಿ. ಮಾಧೂ ಇನ್ನು ಮನೆಗೆ ಹೊರಡೋಣವಲ್ಲವೇ?

**ಮಾಧವ** : ಮಹಾತ್ಮರ ಆಜ್ಞೆ ಇನ್ನು ಪೂರಯಿಸಿಲ್ಲ ತಾಯೀಽಽ! ನಮ್ಮ ದೇವಮಂದಿರಗಳಲ್ಲಿ ಹರಿಜನರ ಪ್ರವೇಶ ಆಯ್ತು ಅಂದರೆ...

**ವಿರೂಪಾಕ್ಷಯ್ಯ** : ನಡೀರಲ್ಲ; ಅದಕ್ಕೆ ಬೇಡವೆಂದವರಾರು?

**ಮಾಧವ :** ಅದು ಕಾಯದೆ ಬಲದಿಂದಾಗಲಿ ಹರಿಜನರ ಹಟದಿಂದಾಗಲಿ ಆಗತಕ್ಕದ್ದಲ್ಲ. ಸವರ್ಣೀಯರು ನಗುನಗುತ್ತ ಬಂದು ಹರಿಜನರನ್ನು ಕೈಹಿಡಿದು ಕರೆದೊಯ್ದು ದೇವಮಂದಿರದಲ್ಲಿ ಪ್ರವೇಶ ಮಾಡಿಸುವಂತೆ, ಎರಡೂ ಪಕ್ಷಗಳಲ್ಲಿಯೂ ಪರಿವರ್ತನೆಯಾಗಬೇಕು. ಇದೇ ನಿಜವಾದ ಮಂದಿರಪ್ರವೇಶ. ಹರಿಜನರ ಸುಧಾರಣೆಯ ಬಗ್ಗೆ ನನ್ನ ಸರ್ವಪ್ರಯತ್ನಗಳನ್ನೂ ಮಾಡಿರುವೆ. ಇದು ಸವರ್ಣೀಯರಿಗೆ ಸಮ್ಮತವಾಗಿದ್ದರೆ, ಇನ್ನು ಮುಂದಿನಕಾರ್ಯ ಊರವರದು. ಈ ಮಾತು ನಿಮಗೆ ಸಮ್ಮತವೇ ಕಾಳಾಚಾರೀ ?

**ಕಾಳಾಚಾರಿ :** ರಾಯರೇ, ಇನ್ನೂ ನಮ್ಮಲ್ಲಿ ನಂಬಿಗೆಯಿಲ್ಲವೇ ನಿಮಗೆ? ಎದೆಯನ್ನು ತೆರೆದು ತೋರಿಸಬಹುದಾಗಿದ್ದರೆ......

**ಮಾಧವ :** ಅವಿಶ್ವಾಸದ ಮಾತೇ ಇಲ್ಲ. ಹರಿಜನರ ಸಲುವಾಗಿ ನಿಮ್ಮಲ್ಲಿ ನಿಜವಾಗಿ ಸಹಾನುಭೂತಿಯಿದ್ದರೆ,ಈ ಜನರಿಗೆ ನಿಮ್ಮ ದೇವಾಲಯುಗಳಲ್ಲಿ ಪ್ರವೇಶವನ್ನು ಕೊಡುತೀರಾ? ಇಷ್ಟಾದರೆ, ಮಹಾತ್ಮರ ಹರಿಜನೋದ್ಧಾರ ಪ್ರತಿಜ್ಞೆ ಪೂರಯಿಸಿದಂತೆ!

**ಶ್ರೀನಿವಾಸ :** (ಸಹಾನುಭೂತಿಯ ಧ್ವನಿಯಲ್ಲಿ) ಪ್ರತಿಜ್ಞೆ ಪೂರಯಿಸಿತಂತೆ! ಬುನಾದಿಯನ್ನು ಭದ್ರವಾಗಿ ಹಾಕದೆ ಮೇಲೆಮೇಲೆಯೇ ಮಂದಿರವನ್ನು ಕಟ್ಟಿದ್ದೀ. ತಳಗಟ್ಟನ್ನು ಬಲಪಡಿಸದೇ ಹೋದರೆ.......

**ಮಾಧವ :** ತಮ್ಮ ಅಪ್ಪಣೆ ಆದರೆ ಅದನ್ನೂ ಮಾಡುತೇನಿ.

**ಡಾಕ್ಟರ :** ಶ್ರೀನಿವಾಸರಾಯರೆ, ಈ ಕನಕನ ಮಂಡಿಗೆಯನ್ನು ಬಿಡಿಸಿ ಹೇಳುತೀರೇನು ?

**ಶ್ರೀನಿವಾಸ :** ಅದನ್ನು ದೇವಸ್ಥಾನದಲ್ಲಿ ಜನತಾ ಜನಾರ್ದನನ ಇದಿರಿಗೇ ಸ್ಪಷ್ಟ ಮಾಡುವೆ. ಮಾಧೂ ನಾಳೆ ಹರಿಜನರೆಲ್ಲ ಬರುತಾರೆ, ಹೌದಲ್ಲೋ ?

**ಮಾಧವ :** ಹೌದು; ಹೆಂಗುಸರು ಗಂಡುಸರು ಎಲ್ಲರೂ....

**ಶ್ರೀನಿವಾಸ :** ಹಾಗಲ್ಲ, ನಾನು ಕೇಳಿದ್ದು; ಎಲ್ಲರೂ ಅಂದರೆ— ಈ ಕೇರಿಯವರು, ಮೊಚೆಗಾರರು, ಮೇದಾರರು, ಢೋರರು, ಚಲವಾದಿ

ಗಳು, ಕಾಳಿಯುವರು— ಇವರೆಲ್ಲರೂ ಹರಿಜನರು ತಾನೇ? ಹರಿಜನೋದ್ಧಾರ ಅಂದರೆ, ಈ ಎಲ್ಲ ಹರಿಜನರೂ ಏಕಕಾಲಕ್ಕೇ ಸವರ್ಣೀಯರೊಳಗೆ ಕೂಡ ಲಿಕ್ಕೆ ಬೇಕು. ನಾಳೆ ದೇವಸ್ಥಾನಕ್ಕೆ ಹೋಗುವಾಗ ವಾಲಗ ಭಜಂತ್ರಿ ಮೊದ ಲಾಗಿ ಎಲ್ಲ ಈ ಮೇಳದ್ದೇ ಇರಬೇಕು. ತಿಳೀತ್ತೇನು ?

**ಮಾಧವ** : ಇದೆಲ್ಲವನ್ನೂ ಅವಶ್ಯವಾಗಿ ಮಾಡುವೆ.

**ಶಂಕರ** : ಈ ಮಂದಿರ ಪ್ರವೇಶದ ನೆನವು ಉಳಿಯಬೇಕಾದರೆ, ಈ ಜನರೆಲ್ಲ ತಮ್ಮ ತಮ್ಮ ಕೈಗಾರಿಕೆಯ ಒಡವೆಗಳನ್ನು ದೇವರಿಗೆ ಕಾಣಿಕೆ ಯಾಗಿ ತರಬೇಕು.

**ಡಾಕ್ಟರ** : Splendid ! ಇದಕ್ಕೆ ನನ್ನದೊಂದು Amendment ಇದೆ : **ಈ ಹರಿಜನೋದ್ಧಾರ ಮಹಾಕಾರ್ಯ ಹಳ್ಳಿಯಿಂದ ಹಳ್ಳಿಗೆ ಸಾಗಿ ಅಮರಜ್ಯೋತಿಯಾಗಬೇಕು.** ಅದಕ್ಕಾಗಿ, ಈ ಮಂದಿರ ಪ್ರವೇ ಶದ ಮಹೋತ್ಸವ ನಮ್ಮ ಬೀಳೂರಿಂದ ಹೊರಟು, ನೆರೆಯ ಏಳೂರಿನ ಮಾರುತೀಶನ ಜಾಗೃತ ದೇವಸ್ಥಾನದಲ್ಲಿಯೇ ಆಗಬೇಕು. ಆ ದೇವರಿಗೆ ಎತ್ತೆತ್ತಲೂ ದೂರದೂರದ ಊರುಗಳಲ್ಲಿ ಕೂಡ-ಅನೇಕಜನ ಭಕ್ತರಿದ್ದಾರೆ. ನನ್ನ ಈ ವಿಚಾರ ಕೈಗೂಡಿದರೆ, ಸುತ್ತಲಿನ ಹತ್ತು ಹರಿದಾರಿಗಳೊಳಗೆ ಏಕ ಕಾಲಕ್ಕೇ ಹರಿಜನರ ಉದ್ಧಾರ ಆದಂತೆ ಆಗತದೆ. (ಎಲ್ಲರೂ ಚಪ್ಪಾಳೆಯನ್ನು ಬಾರಿಸಿ ಸಮ್ಮತಿಯನ್ನು ಸೂಚಿಸುವರು.)

**ಶ್ರೀನಿವಾಸ**: ಅಮೆಂಡ್‌ಮೆಂಟ ಯುನ್ಯಾನಿಮಸ್‌ಲೀ ಪಾಸ್ಡ್ ! ಕಾಳಾಚಾರಿ, ನೀವು ಹೀಗೇ ಏಳೂರಿಗೆ ಹೋಗಬೇಕು. ಅಲ್ಲಿಯ ಸರ ಪಂಚ ಭದ್ರಾಚಾರಿ, ಮಲ್ಲಣ್ಣ ಗೌಡರು, ಕುಲಕರಣಿ ರಾಮರಾಯ ಮತ್ತು ಊರ ಹಿರಿಯರು—ಇವರೆಲ್ಲರಿಗೂ ನನ್ನ ವಿನಂತಿ ಪೂರ್ವಕವಾಗಿ ಈ ವಿಷ ಯವನ್ನು ತಿಳಿಸಬೇಕು. ಅವರ ಮನವೊಲಿಸಿ, ನಾಳೆ ಮಧ್ಯಾಹ್ನಕ್ಕೆ ಸರಿ ಯಾಗಿ ಏಳೂರಿಂದ ಮೆರವಣಿಗೆಯನ್ನು ಹೊರಡಿಸಿಕೊಂಡು ನಮ್ಮನ್ನು ಇದಿ ರುಗೊಳ್ಳಲಿಕ್ಕೆ ಬರಬೇಕು. ನಾವೂ ಅಷ್ಟರಲ್ಲಿ ನಡುದಾರಿಯನ್ನು ಮುಟ್ಟಿರ ತೇವಿ. ನಿಮ್ಮ ಹಲಗೆ—ಮಜಲುಗಳ ಧ್ವನಿ ದೂರದಿಂದಲೇ ನಮ್ಮ ಕಿವಿಗೆ ಬೀಳುವಂತೆ ಉತ್ಸಾಹಪೂರ್ಣವಾಗಿರಬೇಕು. ಆಗಬಹುದಲ್ಲವೆ ?

**ಕಾಳಾಚಾರಿ** : ರಾಮದೇವರ ಕೆಲಸವನ್ನು ಹನುಮಂತ ಮಾಡೋ ದಿಲ್ಲ, ಅನ್ನೋದುಂಟೆ?

**ಶ್ರೀನಿವಾಸ** : ಅಂದಾಂಗ್ಹ ಹನುಮಂತಪ್ಪ ಎಲ್ಲಿದ್ದಾನೆ? ಕಾಣೋ ದಿಲ್ಲವಲ್ಲ? (ಕೂಡಲೆ-ರಾಗವಾದ್ಯಗಳಲ್ಲಿ ನಾಗನೃತ್ಯದಾರಂಭ; ಹನುವಂತಪ್ಪ ಹಾವಾಡಿಗನ ವೇಷದಲ್ಲಿ (Snake charmor) ಬಂದು ನೃತ್ಯವನ್ನು ಆರಂಭಿಸಿ ಮುಗಿಸುತ್ತಾನೆ.)

**ವಿರೂಪಾಕ್ಷಯ್ಯ** : ಭಲೆ ಭಲೆ ಹನುಮಂತಯ್ಯ! ಈ ಗಾರುಡೀ ವಿದ್ಯೆಯಿಂದಲೇ ನಮ್ಮಂಥ ಘಟಸರ್ಪಗಳ ತಲೆದೂಗಿಸಿ ಬಿಟ್ಟೆಯಲ್ಲ! ( ಎಲ್ಲರೂ ನಗುವರು )

**ಮಾಧವ** : ಅಪ್ಪಾಜೀ, ಮಧ್ಯಾಹ್ನ ಆಯ್ತು, ನಿಮ್ಮ ಊಟ ಇಲ್ಲೇ ಆಗಲಿ!

**ಶ್ರೀನಿವಾಸ** : ಮಹಾತ್ಮರ ಪ್ರತಿಜ್ಞೆ ಪೂರಯಿಸಲಿ. ದೇವಮಂದಿರ ಪ್ರವೇಶದ ಶುಭಸಮಯದಲ್ಲಿಯೇ **ಹರಿಜನರೊಡನೆ ಸಹಪಂಕ್ತಿ ಮಾಡೋಣ;** ಸಮಾಜ ಸಾಮರಸ್ಯದ ಮೇಲ್ಪಂಕ್ತಿಯನ್ನು ಹಾಕೋಣ. ಮರಿಯಪ್ಪಾ, ನಿಮಗೆಲ್ಲ ನಾಳೆ ಹಬ್ಬದ ಔತಣ!

**ಮಾಧವ** : ಅಪ್ಪಾಜೀಽಽ. ( ನಮಸ್ಕರಿಸಿ ನಿಂತು ಕಣ್ಣಲ್ಲಿ ನೀರು ತರುವನು. )

**ಶ್ರೀನಿವಾಸ** : (ಮಗನನ್ನು ಮಮತೆಯಿಂದ ಮೈದಡವುತ್ತ)ಹುಚ್ಚಣ್ಣ ತಂದು! ಕಣ್ಣೀರು ಸುರಿಸತಾನೆ! ನಾವೇನು ದೊಡ್ಡ ಉಪಕಾರ ಮಾಡಿ ದಿವಿ ನಿನ್ನ ಮೇಲೆ, ಅಂತ ತಿಳಿದೀಯೇನು? ಒಳ್ಳೆದು ಬರತೇವಿನ್ನು...!

**ರಮಾದೇವಿ** : (ಗಂಡನಿಗೆ) ನಾಳೆ ನಮಗೆ ದೊಡ್ಡ ಹಬ್ಬ. ಎಲ್ಲಾ ಸೌರಣೆ ನನ್ನಂಥ ಮುದುಕೀ ಕಡೆಯಿಂದ ಹೇಗೆ ಸಾಧ್ಯ ಆದೀತು? ಸೀತಾನ್ನ ಕರಕೊಂಡು ಹೋಗೋಣಲ್ಲ!

**ಶ್ರೀನಿವಾಸ** : ( ಮುಗುಳನಗೆಯಿಂದ ಸಮ್ಮತಿಯನ್ನು ಸೂಚಿ ಸುವ. )......

**ರಮಾದೇವಿ :** ಮಾಧೂ ಸೀತಾನ್ನ ಕರ......

**ಮಾಧವ :** ಇದಕ್ಕಾಗಿ ನನ್ನನ್ನು ಕೇಳಬೇಕೇ ಅವ್ವಾ?

**ಸೀತಕ್ಕ :** (ಬಂದು ಅತ್ತೆಯ ಹತ್ತಿರ ನಿಲ್ಲುವಳು....)...

**ಶಂಕರ :** ಬರತೇವಿ ಮಾಧೂರಾಯರೇ. ಎಲ್ಲಾರನ್ನೂ ತಯಾರ ಮಾಡಿರಿ. ಹಾಂ! ( ಕಾಳಾಚಾರಿ ಒಂದು ಕಡೆಗೆ ಉಳಿದವರು ಮತ್ತೊಂದೆಡೆಗೆ ಹೋಗುವರು. )

## ಪ್ರವೇಶ ೪

**ಸನ್ನಿವೇಶ :** ಬೀದಿಯ ಮೇಲೆ (ರಸ್ತಾಪರದೆಯ ಮುಂದೆ) ಹರಿಜನೋದ್ಧಾರ ಮೆರವಣಿಗೆಯು ಶಹನಾಯಿ 'ಮಜಲು' ಬರುವದು. ಅದು ತುಸು ಮುಂದೆ ಸಾಗುತ್ತಲೇ ಹಿಂದಿನಿಂದ ಶ್ರೀನಿವಾಸರಾಯರು, ತ್ರಿಮೂರ್ತಿಗಳು, ಡಾಕ್ಟರ, ಮಾಧವರಾಯರು, ಹನುಮಂತಪ್ಪ ದೇವರ ಪಲ್ಲಕ್ಕಿಯನ್ನು ತರುವರು. ಸೀತಕ್ಕ, ಲಕ್ಷ್ಮೀ, ರಮಾದೇವಿ ಆರತಿ ಹಿಡಿದಿದ್ದಾರೆ. ಕೈಗಾರಿಕೆಯ ಕಾಣಿಕೆಗಳನ್ನು ಒಡಿದ ಹರಿಜನರು; ಕೆಲವರ ಕೈಯಲ್ಲಿ ಮಾಲಾಲಂಕೃತ ಮಹಾತ್ಮಾಜಿ ಫೋಟೋ—ಅಯ್ದಾರು ನಿಮಿಷ ಶಹನಾಯಿ ವಾದನ ನಡೆಯುವದು, ಹಿಂದೆ ದೇವಸ್ಥಾನದ ಸಜ್ಜಿಕೆ ಆಗುವವರೆಗೂ—ನಂತರ ತೆರೆಯಲ್ಲಿ ಹಲಗೆ, ಮಜಲುಗಳ ಸಪ್ಪಳ ಕೇಳುವುದು...

**ಶ್ರೀನಿವಾಸ :** ದೀಕ್ಷಿತರೆ, ಕಾಳಾಚಾರಿ ಏಳೂರವರನ್ನು ಕರೆತಂದ ಅಂತ ಕಾಣತದೆ.

**ಶಂಕರ :** ಅದೋ, ಬಂದೇ ಬಿಟ್ಟರಲ್ಲ!

( ಏಳೂರು—ಬೀಳೂರಿನ ಜನರ ಪರಸ್ಪರ ಸಂದರ್ಶನ, ಆಲಿಂಗನ ಮುಂತಾಗಿ; ಮತ್ತೆ ಎರಡೂ ಪಕ್ಷಗಳ ಮಜಲು. ಬಳಿಕ ಎಲ್ಲರೂ ಏಳೂರು ಕಡೆಗೆ ಹೊರಡುವರು.

**ಸೂಚನೆ :** ಮಾರುತಿ ದೇವಾಲಯ ದೃಶ್ಯ ಸಜ್ಜಾಗುವ ವರೆಗೆ ಈ ವಾದ್ಯ-ವಾದನಗಳನ್ನು ನಡೆಸತಕ್ಕದ್ದು. )

## ಪ್ರವೇಶ ೫

**ಸನ್ನಿವೇಶ :** ಏಳೂರಿನ ಮಾರುತಿಯ ಭವ್ಯ ದೇವಾಲಯ. ಸಿಂಗರಿಸಿದ ದೇವಮೂರ್ತಿ. ಇದಿರಿಗೆ ನಂದಾದೀಪಗಳು. ಸಾಧ್ಯವಿದ್ದರೆ ಮೂರು ನಾಲ್ಕು ಗಂಟೆಗಳನ್ನು ತೂಗು ಬಿಡುವುದು. ಪೂಜಾ ಸಾಮಗ್ರಿ: ಜಾಗಟೆ, ಗಂಟೆ, ಶಂಖ. ಜಯಬಲಭೀಮ-ಜಯಬಜರಂಗಬಲೀಕೀ ಜಯ—ಎನ್ನುತ್ತ ಜನಸಂದಣಿಯ ಪ್ರವೇಶ. ಎಲ್ಲರೂ ದೇವಸನ್ನಿಧಾನದಲ್ಲಿ ನಿಲ್ಲುವರು. ಶಹನಾಯಿ ವಾದ್ಯ ನಿಲ್ಲುವದು.

**ಶ್ರೀನಿವಾಸ :** ಶಾಂತಂ! ಎಲ್ಲರೂ ಶ್ರೀ ಮಾರುತಿ ದೇವರ ಕಡೆಗೆ ನೋಡುತ್ತ ನಿಲ್ಲಿರಿ. ದೀಕ್ಷಿತರೇ, ಪೂಜೆ ಆರಂಭವಾಗಲಿ.

(ಶಂಕರ ದೀಕ್ಷಿತ ಪೂಜೆಯನ್ನು ಆರಂಭಿಸಿ ಮಂತ್ರವನ್ನು ಹೇಳುತ್ತ ಸಂಗೀತ ಸೇವಾಮವಧಾರಯ—ಹಂ-ಸಂಗೀತ ಸಾಗಲಿ-ಎನ್ನುವರು)

**ಮಾಧವ :** ( ವೈಷ್ಣವ ಜನತೋ-ರಘುಪತಿರಾಘವರಾಜಾರಾಮ-ಪದಸಾಮೂಹಿಕವಾಗಿ. ಭಜನೆ, ಜಯಘೋಷ ಮುಂತಾಗಿ)

**ಸೂಚನೆ :** ನರ್ತನ ಸೇವಾಮವಧಾರಯ-ಎಂದು ಲಕ್ಷ್ಮಿಯ ಕಡೆಯಿಂದ ಅಥವಾ ಸೀತಕ್ಕ-ಬೇರೆ ಯಾರಿಂದಲಾದರೂ ನರ್ತನವನ್ನೂ ಮಾಡಿಸಬಹುದು)

**ಶ್ರೀನಿವಾಸ :** (ಸಂಗೀತ-ನರ್ತನ ಸೇವೆಗಳು ಮುಗಿದ ಮೇಲೆ) ದೀಕ್ಷಿತರೇ, ಮಂಗಲಾರತಿ ಮಾಡಿರಿ. ಸ್ವಾಮಿಗಳೇ, ಹರಿಜನರ ಕೈಯೊಳಗೆ ಗಂಟೆ ಜಾಗಟೆ ಕೊಡಿರಿ. ಕಾಳಾಚಾರ್ರೇ, ಎಲ್ಲರನ್ನೂ ಮುಂದಕ್ಕೆ ಕರೆಯಿರಿ. ಡಾಕ್ಟರರೇ, ನೀವು ರಿಂಗ್‌ಮಾಸ್ಟರ. ಎಲ್ಲ ಹರಿಜನರಿಂದಲೂ ದೇವರಿಗೆ ಸೇವೆಯನ್ನು ಸಲ್ಲಿಸಬೇಕು; ಸರ್ವರಿಗೂ ದೇವರ ಪ್ರಸಾದವನ್ನು ಮುಟ್ಟಿಸಬೇಕು.

(ರಾಯರ ಹೇಳಿಕೆಯಂತೆ ಪೂಜಾ-ಪ್ರಸಾದಗಳು ನೆರವೇರುವುವು. ಲಕ್ಷ್ಮಿ ದೇವರಿಗೆ ಆರತಿಯನ್ನೆತ್ತುವಳು. ಜಯಘೋಷದೊಡನೆ ಹರಿಜನರು ದೀರ್ಘದಂಡ ನಮಸ್ಕಾರ ಹಾಕುವರು)

ಮಾಧೂ, ನಮ್ಮೆಲ್ಲರಿಗೂ ಪೂಜ್ಯರಾದ ಮಹಾತ್ಮರ ಆತ್ಮಕ್ಕೆ ಶಾಂತಿ ಯಾಯಿತೆ?

ಮಾಧವ : ಹಿರಿಯರೇ ಕಂಕಣವನ್ನು ಕಟ್ಟಿಕೊಂಡು ನಿಂತಮೇಲೆ ಯಾವುದು ಅಸಾಧ್ಯ? ಸರ್ವಸವರ್ಣೀಯರಿಗೆ-ಅಲ್ಲಲ್ಲ, ಏಕೀಕೃತ ಭಾರತೀಯರಿಗೆ, ಎಲ್ಲ ಹರಿಜನರ ಪರವಾಗಿ ಅನಂತ ವಂದನೆಗಳನ್ನು ಸಲ್ಲಿಸುವೆ. (ಶಿರಬಾಗಿ ಕೈಮುಗಿಯುವನು)

ಡಾಕ್ಟರ : ಶ್ರೀನಿವಾಸರಾಯರೇ, ಬಲಭೀಮನ ಸನ್ನಿಧಿಯಲ್ಲಿ, ಜನತಾ ಜನಾರ್ದನನ ಸಮ್ಮುಖದಲ್ಲಿ ತಾವು ಆ ಕನಕನ ಮುಂಡಿಗೆಯನ್ನು ಬಿಡಿಸಿ ಹೇಳಬಹುದಲ್ಲ!

ಶ್ರೀನಿವಾಸ : ಅತ್ಯಾನಂದದಿಂದ! ಬಾಂಧವರೇ......

ಡಾಕ್ಟರ : (ಗದ್ದಲವನ್ನು ಶಾಂತ ಮಾಡುತ್ತ) ಕೇಳಿರಿ, ಕೇಳಿರಿ... ಸದ್ದು—

ಶ್ರೀನಿವಾಸ: ಗಿಡಬಳ್ಳಿಗಳು ಬೆಳೆಯಬೇಕಾದರೆ ಬೇರಿಗೆ ನೀರೆರೆಯಬೇಕು. ಮನೆಯನ್ನು ಕಟ್ಟಬೇಕಾದರೆ ಭದ್ರವಾದ ಬುನಾದಿಯನ್ನು ಹಾಕಬೇಕು. ನಮ್ಮ ಸ್ವತಂತ್ರ ಭಾರತ ಸರಕಾರ ಇದೇ ಉದ್ದೇಶದಿಂದಲೇ ಅಖಂಡ ಭಾರತೀಯರ ಹೊಟ್ಟೆಬಟ್ಟೆಗಳ ತೊಡಕನ್ನು ಮೊದಲಿಗೇ ಬಿಡಿಸುತ್ತದೆ. ಇದೇ ತತ್ತ್ವವನ್ನೇ ಹರಿಜನೋದ್ಧಾರಕಾರ್ಯಕ್ಕೂ ಅನ್ವಯಿಸಬೇಕು. ಮಾಧು ಅವರೆಲ್ಲರ ಉನ್ನತಿಯನ್ನು ಅನೇಕ ಬಗೆಯಾಗಿ ಮಾಡಿದ್ದಾನೆ. ಅದಕ್ಕೆ ಬಲ ಬರಬೇಕಾದರೆ ಹರಿಜನರಿಗೆ ಆರ್ಥಿಕ ಬೆಂಬಲವನ್ನು ಕೊಡೋದು ಅತ್ಯವಶ್ಯ. ನಮ್ಮ ಕೇಂದ್ರ ಮತ್ತು ರಾಜ್ಯ ಸರಕಾರಗಳು ಹರಿಜನರ ಹಿತಕ್ಕಾಗಿ ಶಕ್ತಿಮೀರಿ ಪ್ರಯತ್ನ ಮಾಡುತ್ತಿವೆ. ಆ ಪ್ರಯತ್ನಗಳು ಫಲಿಸಬೇಕಾದರೆ ಸಾರ್ವಜನಿಕರೂ ಸರ್ವರೀತಿಯಿಂದ ಸರಕಾರವನ್ನು ಬೆಂಬಲಿಸಬೇಕಾಗುತ್ತದೆ. ಸರ್ವ ಸವರ್ಣೀಯರೂ ಈ ಮಾತನ್ನು ಎಂದೂ ಮರೆಯಕೂಡದು.

ಡಾಕ್ಟರ : Hear hear...(ಚಪ್ಪಾಳೆ)

**ವಿರೂಪಾಕ್ಷಯ್ಯ :** ಅದಕ್ಕೇ ರಾಯರೇ, ಇಂಥಾ ಮಹಾ ಕಾರ್ಯಕ್ಕೆ ಶ್ರೀಮಂತರು ಮುಂದಾಗಬೇಕು, ಅಂತ ನಾ ಹೇಳಿದ್ದು...ಕೇಳಿರಿ, ಕೇಳಿರಿ.

**ಶ್ರೀನಿವಾಸ :** ಮಾಧೂ ಬಾ ಅಪ್ಪಾ ಇಲ್ಲಿ. (ಮಾಧೂ ಬರುವ) ಈ ವರೆಗೆ ನೀನೊಬ್ಬನೇ ನನ್ನ ಮಗ ಅಂತ ತಿಳಿದಿದ್ದೆ. ಈಗ ಈ ಹರಿಜನ ರೆಲ್ಲ ನಿನಗೆ ಅಣ್ಣತಮ್ಮಂದಿರು, ಅಕ್ಕತಂಗಿಯರು; ಅರ್ಥಾತ್, ನನಗೆ ಮಕ್ಕ ಳಲ್ಲವೇ ಅವರೆಲ್ಲರೂ.

**ಮಾಧವ :** ನನ್ನ ಭಾಗದ ದೇವರೇ ಈ ಮಾತುಗಳನ್ನು ಹೇಳಿಸು ತ್ತಿದ್ದಾನೆ ನಿಮ್ಮಿಂದ.

**ಶ್ರೀನಿವಾಸ :** ನಿನ್ನಂತೆ ಈ ಮಕ್ಕಳಿಗೂ ನನ್ನ ಆಸ್ತಿಯಲ್ಲಿ ಪಾಲು ಸಲ್ಲಬೇಕಲ್ಲವೇ?

ಡಾಕ್ಟರ : ಶ್ರೀನಿವಾಸರಾಯ—ಜಿಂದಾಬಾದ. (ಚಪ್ಪಾಳೆ)

**ಶ್ರೀನಿವಾಸ :** ನನ್ನಂಥ ಕ್ಷುದ್ರ ಕೀಟಕನ ಜಯಜಯಕಾರಬೇಡ. ಮಾನವಸಮಾನತೆ—ಸಮಾಜ ಸಾಮರಸ್ಯಗಳ ಸಲುವಾಗಿ ಸರ್ವಸ್ವವನ್ನೂ ತ್ಯಾಗಮಾಡಲು ಸಿದ್ಧನಾದ ತ್ಯಾಗವೀರ ಈತ-ಮಾಧು! ಈ ಮರ್ಯಾದೆ ಅವನಿಗೇ ಸಲ್ಲಬೇಕು. ಮಗು, ಇದು ನಿನ್ನ ಆಸ್ತಿ. ನಿನ್ನ ಇಚ್ಛೆಯಂತೆಯೇ ಇದನ್ನು ಹರಿಜನರಿಗೆ ಹಂಚಬೇಕೆನ್ನುವೆ.

**ಮಾಧವ :** ಮಹಾತ್ಮರು ಹೇಳುತಿದ್ದದ್ದೂ ಇದೇ: ಸಾವಿರ ಮಾತು ಆಡೋದಕ್ಕಿಂತ ಒಂದೇ ಒಂದು ಯೋಗ್ಯ ಕೃತಿಯನ್ನು ಮಾಡಿ ತೋರಿಸಿರಿ; ಆಗ ಸ್ವರ್ಗಸುಖ ಒಂದೊಂದೇ ಮೆಟ್ಟಲು ಇಳಿಯುತ್ತ ಭೂಮಿಗೆ ಬರುತದೆ, ಅಂತ! ಅಪ್ಪಾಜೀ, ನಿಮ್ಮ ಇಚ್ಛೆಯೇ ನನ್ನ ಇಚ್ಛೆಯಲ್ಲವೆ?

**ಶ್ರೀನಿವಾಸ :** ಸರಿ. ಆ ಆಸ್ತಿಯನ್ನು ಹಂಚೋದಕ್ಕೆ ಮಾತ್ರ ಕೆಲವು ಕರಾರುಗಳಿವೆ. ಹನುಮಂತಪ್ಪ, ಲಕ್ಷ್ಮೀದೇವೀ ಮುಂದೆ ಬನ್ನಿರಿ. (ಅವರಿ ಬ್ಬರೂ ನಾಚುತ್ತ ಮುಗುಳು ನಗುತ್ತ ಬಂದು ತಲೆ ತಗ್ಗಿಸಿ ನಿಲ್ಲುವರು) ನಾನು ಇವರನ್ನು ಏಕೆ ಕರೆದೆ-ಎಲ್ಲರಿಗೂ ತಿಳಿಯಿತೇ?

ವಿರೂಪಾಕ್ಷಯ್ಯ : (ನಗುತ್ತ) ತಿಳೀದೇ ಏನ್ರೀಽಽ? ಮದುಮಕ್ಕಳಿಗೆ ಅಕ್ಷತೇ ಕಾಳು ಹಾಕುತೇವ್ರೀ. ಬಡ ಜಂಗಮರ ದಕ್ಷಿಣೇ ಮುಳಗಿಸಬ್ಯಾಡ್ರೀ, ತೀರಿತು.

(ಎಲ್ಲರಿಂದಲೂ ನಗು-ಚಪ್ಪಾಳೆ)

ಶ್ರೀನಿವಾಸ : ಮರಿಯಪ್ಪಾ, ಬಾ ಇಲ್ಲಿ. (ಬಂದ ಮೇಲೆ) ನಿಮ್ಮ ಸಮಾಜದೊಳಗೆ ಸೂಳೆಯರನ್ನು ಬಿಡುವ ಕೆಟ್ಟ ರೂಢಿ ಅದೆ. ಆ ದುಷ್ಟ ರೂಢಿ ಈವೊತ್ತಿನಿಂದಲೇ ಮಾಯವಾಗಬೇಕು. ಬಲಭೀಮ ಅದಕ್ಕೆ ಹರಕೆ ಕೊಡುತಾನೆ. ತಿಳೀತೋ? ಮರಿಯಪ್ಪ,ಈ ಹನುಮಂತಪ್ಪನಿಗೆ ನಿನ್ನ ಮಗಳನ್ನು ಕೊಡತೀಯಾ!

ಮರಿಯಪ್ಪ : (ಕೈಮುಗಿಯುತ್ತ) ದಣೇರೇ, ನನ್ನ ಯೋಳೇಳು ಕುಲದ ಹಿರೇರೂ ಉದ್ಧಾರ ಆಗತಾರ್ರೀ ಹೀಂಗಾದ್ರ! ಇನ್ನೇನು ಹೇಳಲ್ರೀ ಹೆಚಿಗೀ ?

ಶ್ರೀನಿವಾಸ: ಹನುಮಂತಪ್ಪಾ, ಅಮ್ಮಾಲಕ್ಷ್ಮೀ ನೀವು ಒಬ್ಬರನ್ನೊಬ್ಬರು ಒಪ್ಪುತೀರಾ ? (ಅವರಿಬ್ಬರ ನಗೆ–ನಾಚಿಕೆಗಳು; ವಧೂವರರು ರಾಯರ ಪಾದಗಳನ್ನು ಮುಟ್ಟಿ ನಮಸ್ಕರಿಸುವರು.) ದೀಕ್ಷಿತರೇ, ವಿವಾಹ ಮಂತ್ರಗಳು ಆರಂಭವಾಗಲಿ. ಅಯ್ಯನೋರೇ ಕಾಳಾಚಾರ್ರೇ ದನಿಗೂಡಿಸಿರಿ. (ಮಂತ್ರಾರಂಭ, ಅಕ್ಷತಾರೋಪಣ; ಸೀತಕ್ಕ ಮದುಮಕ್ಕಳಿಗೆ ಆರತಿಯನ್ನು ಬೆಳಗುವಳು. ಶಹನಾಯಿಯಲ್ಲಿ ಮಂಗಲವಾದ್ಯವಾಗಿ ಮುಗಿಯುವುದು.)

ಡಾಕ್ಟರ ರಾಯರೇ, ಮದುಮಕ್ಕಳಿಗೆ ಏನಾದರೂ ಉಪದೇಶ ಮಾಡುತೀರಾ ?

ಶ್ರೀನಿವಾಸ ಅದಕ್ಕೆ ಅಧಿಕಾರಿಗಳು, ತರುಣರಾದ ನೀವು-ಮಾಧು. ನಾನು ಬಲಭೀಮನ ಸಾಕ್ಷ್ಯವಾಗಿ ಹೇಳೋದೆಂದರೆ– ಈ ಮದುಮಕ್ಕಳಿಗೆ ಹತ್ತು ಎಕರೆ ಭೂಮಿಯನ್ನು ಉಡುಗೊರೆಯಾಗಿ ಕೊಡುತೇನೆ....

(ಸಮೂಹದಲ್ಲಿ ಶ್ರೀನಿವಾಸರಾಯ–ಜಿಂದಾಬಾದ.)

...(ರಾಯರು ಕೈಮುಗಿಯುತ್ತ) ದಯವಿಟ್ಟು, ನನ್ನನ್ನು ಹೊಗಳಿ ಹೊಗಳಿ ಗೊಣ್ಣಶೂಲದಲ್ಲಿ ಇಕ್ಕಬೇಡಿರಿ. ಮಾಧೂ, ನನಗೆ ೫೦ ಎಕರೆ ಭೂಮಿ ಸಾಕಲ್ಲವೆ ?

**ಮಾಧವ :** ಅಪ್ಪಾಜೀ, ನನ್ನನ್ನೇನು ಕೇಳಬೇಕಾದ್ದೇ ಇಲ್ಲ; ಎಂತಾದರೂ ಹರಿಜನರ ಸರ್ವಾಂಗೀಣ ಉನ್ನತಿ ಆದರೆ ತೀರಿತು.

**ಶ್ರೀನಿವಾಸ :** ಸರಿ, ಉಳಿದ ನಮ್ಮ ಎರಡುನೂರು ಎಕರೆ ಭೂಮಿಯನ್ನು ಈ ಬೀಳೂರಿನ ಎಲ್ಲ ಹರಿಜನರ ಉದ್ಧಾರಕ್ಕಾಗಿ ದಾನ ಮಾಡಿರುವೆ; ಆದರೆ ಒಂದು ಕರಾರು: ಈ ಭೂಮಿಯ ಮೇಲೆ ಸಾಮೂಹಿಕ ಒಡೆತನವಿರಬೇಕು. ಎಲ್ಲರೂ ಒಟ್ಟಾಗಿ ದುಡಿಯಬೇಕು, ಹುಟ್ಟುವಳಿಯನ್ನು ಸಮಾನವಾಗಿ ಹಂಚಿಕೊಳ್ಳಬೇಕು. ಒಪ್ಪುವಿರಾ ?

(ಮತ್ತೆ ಜಯಘೋಷ-ಚಪ್ಪಾಳೆ) ಮಾಧೂ, ಈ ನಿನ್ನ ಬಾಂಧವರ ಬೇಸಾಯ-ಬಾಳುಗಳಿಗೆ ಅನುಕೂಲವಾಗುವಂತೆ, ನಮ್ಮ ಬ್ಯಾಂಕ ಹಣದಿಂದ, ಒಂದು 'ವಿವಿಧೋದ್ದೇಶ ಸಹಕಾರಿ ಸಂಘ' ಏರ್ಪಡುವಂತೆ ಪ್ರಯತ್ನ ಮಾಡು.

ಡಾಕ್ಟರರೇ, ಹಿರಿಯರೇ ಮತ್ತು ಬಾಂಧವರೇ, ಹರಿಜನೋದ್ಧಾರ ಮಹಾಮಂದಿರ ನಿರ್ಮಾಣಕ್ಕಾಗಿ ನಾನು ಹಾಕಬೇಕಾಗಿದ್ದ ಭದ್ರ ಬುನಾದಿ ಇದೇ !...

(ಎಲ್ಲರೂ ಚಪ್ಪಾಳೆಯಿಂದ ಆನಂದವನ್ನು ವ್ಯಕ್ತ ಮಾಡುವರು.)

...ಹನುಮಂತಪ್ಪಾ, ಈ ಜನರ ಬೌದ್ಧಿಕ ಉನ್ನತಿಯ-ಆಚಾರ ವಿಚಾರಗಳ ಪ್ರಗತಿಯ ಹೊಣೆಗಾರಿಕೆ ನಿಮ್ಮದು-ನವದಂಪತಿಗಳದು ! ನಿಮ್ಮ ಭವಿಷ್ಯತ್ತಿನ ಕಾರ್ಯ ಕಲಾಪಗಳಿಗೆ ನನ್ನ ಮನೆಯನ್ನೇ ಒಪ್ಪಿಸಿರುವೆ. ಆ ಆವಾರದಲ್ಲಿಯೇ ನಿಮಗೆ ವಸತಿಯನ್ನು ಮಾಡಿಕೊಡುವೆ. ಊರೊಳಗೆ ಮನೆ ಕಟ್ಟಲು ಹರಿಜನರಿಗೆ ಸ್ಥಳಗಳನ್ನು ಕೊಡಿಸುವೆ.

**ಹನುಮಂತಪ್ಪ :** ಧನ್ಯರಾದೆವು. ನಿಮಗೆ ನಾವೆಲ್ಲ ಚಿರಋಣಿಗಳು, ಕೃತಜ್ಞರು.

**ಶ್ರೀನಿವಾಸ :** ಈ ಕೃತಜ್ಞತೆ ನನಗೆ ಕೃತಿ ರೂಪದಲ್ಲಿ ಬೇಕು; ಶಬ್ದದಿಂದಲ್ಲ. ನಿಮ್ಮ ಸಾಹಸ ಪ್ರಯತ್ನಗಳಿಂದ, ಮಾನವ ಸಮಾನತೆ ಸಮಾಜ ಸಾಮರಸ್ಯಗಳ ನಿತ್ಯ ನಂದಾದೀಪ ಬೆಳಗಬೇಕು! ಹರಿಜನ ಬಾಂಧವರೇ, ಮಂದಿರ ಪ್ರವೇಶದ ನಿಮ್ಮ ಹಂಬಲು ಹಣ್ಣಾಯಿತೇ? ಮಾಧೂ, ಮತ್ತೇನಾದರೂ ನಿನ್ನ ಇಚ್ಛೆ ಈಡೇರಬೇಕಾಗಿದೆಯೇ?

**ಡಾಕ್ಟರ :** ಅದನ್ನು ನಾನು ಹೇಳುವೆ. ಹರಿಜನೋದ್ಧಾರ ಅಥವಾ ಸಮಾಜ ಸಾಮರಸ್ಯದ ಭವ್ಯ ಭವನ ಮುಗಿಲೆತ್ತರವನ್ನು ಮುಟ್ಟುವವರಿಗೆ ಶ್ರೀನಿವಾಸರಾಯರು ಚಿರಂಜೀವಿಗಳಾಗಲಿ ಸವರ್ಣೀಯ ಸಾಮಾಜಿಕರಿಗೆ ಅಸ್ಪೃಶ್ಯತಾನಿವಾರಣೆಯ ಸದ್ಬುದ್ಧಿ ಸಮೃದ್ಧವಾಗಲಿ! ಈ ಉದ್ಧಾರ ಮಾರ್ಗದಲ್ಲಿ ಹರಿಜನರು ವೇಗವಾಗಿ ಮುನ್ನಡೆಯಲಿ! ಭಾರತದ ಆದ್ಯಂತವೂ ಶಾಂತಿ-ಸಮತೆ-ಸುಖ-ಸಮೃದ್ಧಿಗಳು ;ನಲಿದಾಡಲಿ! ಹೂಂ, ಎಲ್ಲರೂ ಒಮ್ಮೆಲೇ ಹೇಳಿರಿ: ಶ್ರೀನಿವಾಸರಾಯ— ಜಿಂದಾಬಾದ! ಹರಿಜನೋದ್ಧಾರ— ಜಿಂದಾಬಾದ! ಭಾರತಮಾತಾಕೀ— ಜೈ; ಕರ್ನಾಟಕ ಮಾತಾಕೀ— ಜೈ; ಮಹಾತ್ಮಾಗಾಂಧಿಕೀ— ಜೈ; ಸಮಾಜಸಾಮ**ರಸ್ಯ**—ಜಿಂದಾಬಾದ!!

(ಶಹನಾಯಿಯಲ್ಲಿ ವಂದೇ ಮಾತರಂ ಗೀತೆ... ಎಲ್ಲರೂ ದನಿಗೂಡಿಸುವರು.)

(ನಾಲ್ಕನೆಯ ಅಂಕ ಮುಗಿದುದು.)

ಜಯ — ಹಿಂದ

# ಸಮಾಜ ಸಾಮರಸ್ಯ ನಾಟಕದ
# ಪಾತ್ರವರ್ಗ

**ಪುರುಷ ಪಾತ್ರಗಳು :**

| | |
|---|---|
| ಶ್ರೀನಿವಾಸರಾಯ | — ನಿಷ್ಠಾವಂತ ಸನಾತನಿ, ಗ್ರಾಮ ಪಂಚಾಯತದ ಸರಪಂಚ, ಊರ ದೇಸಾಯಿ. |
| ಶಂಕರ ದೀಕ್ಷಿತ<br>ವಿರೂಪಾಕ್ಷಯ್ಯ<br>ಕಾಳಾಚಾರಿ | — ಸೋಗಿನ ಸನಾತನಿಗಳು; ಗ್ರಾಮ ಪಂಚಾಯತದ ಸದಸ್ಯರು. |
| ಮಾಧವರಾಯ | — ಶ್ರೀನಿವಾಸ ದೇಸಾಯಿಯ ಮಗ; ಗಾಂಧೀಭಕ್ತ, ಸಮಾಜ ಸಾಮರಸ್ಯದ ಕಾರ್ಯಕರ್ತ. |
| ಡಾಕ್ಟರ | — ಮಾಧವರಾಯನ ಅನುಯಾಯಿ. |
| ಹನುಮಂತಪ್ಪ | — ವಿದ್ವಾಂಸನಾದ ಹರಿಜನ ಮತ್ತು ಮಾಧವರಾಯನ ಅನುಯಾಯಿ. |
| ದುರುಗಪ್ಪ<br>ಮರಿಯಪ್ಪ | — ಹರಿಜನರು. |

ಶ್ಯಾಮಣ್ಣ, ಬೇರೆ ಹರಿಜನರು ಮತ್ತು ಶಹನಾಯಿ ಮೇಳದಲ್ಲಿಯ ಪಾತ್ರಗಳೂ ಮುಂತಾಗಿ ಆನುಷಂಗಿಕ ಪಾತ್ರಗಳು.

**ಸ್ತ್ರೀ ಪಾತ್ರಗಳು :**

| | |
|---|---|
| ರಮಾದೇವಿ | ಶ್ರೀನಿವಾಸ ದೇಸಾಯಿಯ ಧರ್ಮಪತ್ನಿ, ಮಾಧವರಾಯನ ತಾಯಿ. |
| ಸೀತಕ್ಕ | ಮಾಧವರಾಯನ ಧರ್ಮಪತ್ನಿ. |
| ಲಕ್ಷ್ಮೀ | ಹರಿಜನ ಮರಿಯಪ್ಪನ ಮಗಳು. |

# ಪುನರ್ಜನ್ಮ

(ಏಕಾಂಕ ನಾಟಕ)

ಪಾತ್ರಗಳು :

| | | | |
|---|---|---|---|
| ರಾಮರಾಯ | — | ಕಚೇರಿಯ ಕಾರಕೂನ, ವಯಸ್ಸು | ೪೦ |
| ಮಾಲತಿ | — | ರಾಮರಾಯನ ಹೆಂಡತಿ, ವಯಸ್ಸು | ೩೫ |
| ಶೀಲಭದ್ರ | — | ಮಾಲತಿಯ ತಮ್ಮ, ವಯಸ್ಸು... | ೨೯ |
| ಕಿರಾಣಿ ಸೆಟ್ಟಿ | — | ವಯಸ್ಸು ಸುಮಾರು ... | ೪೮ |
| ಡಾಕ್ಟರ | — | ವಯಸ್ಸು | ೨೫ |
| ಪಠಾಣ (ವೇಷಾಂತರಿತ ಶೀಲಭದ್ರ) | — | ವಯಸ್ಸು.... | ೩೦ |
| ರಂಗು | — | ರಾಮರಾಯನ ಮಗಳು, ವಯಸ್ಸು | ೮ |
| ಚಿದಂಬರ | — | ರಾಮರಾಯನ ಮಗ, ವಯಸ್ಸು | ೬ |

**ಚಿದಂಬರ :** ಅವ್ವಾಽಽ ನೀರುಽಽಽ; ನೀರು ಕೊಡವ್ವಾಽಽ! ಎಲ್ಲಿದ್ದೀ ಅವ್ವಾಽಽಽ!

**ಮಾಲತಿ :** ಬಂದೆ ನನ್ನರಾಜಾಽಽ! ಬಂದೆಽಽ. (ಬರುವಳು)

**ಚಿದಂಬರ :** ಅವ್ವಽಽ ನೀರುಽಽಽ! (ಅಳುವನು.)

**ಮಾಲತಿ :** ( ಮಗುವನ್ನು ಎತ್ತಿಕೊಂಡು ಸಂತಯಿಸುತ್ತ ) ಜ್ವರ ಬಂದಾಗ ನೀರು ಕುಡೀಬಾರದು ನನ್ನ ಚಿನ್ನಾಽಽ ಈಗ ಜ್ವರ ಇಳೀಲಿ; ಏನರೆ ಮಾಡಿ ಕೊಡತೇನಿ; ಮಲಗಪ್ಪ ಸುಮ್ಮನೆ! ಜಾಽಽಣ ನಮ್ಮ ಚಿಮ್ಮಣ್ಣಽ!

**ಚಿದಂಬರ :** ಹಾಂಗಾದರ ಪೇಪರಮಿಂಟಾ ಕೊಡುಽಽ.

**ಮಾಲತಿ :** ಈಗ ಅವರು ಬರಲಿ ಕಚೇರಿಯಿಂದ; ನಮ್ಮ ಚಿಮ್ಮಣ್ಣಗ ಬೊಗಸಿತುಂಬ ಪೇಪರಮಿಂಟಾ ತರ್ರಿ ಅಂತ ಹೇಳತೇನಿ! ಈಗ ಕಣ್ಣತುಂಬ ನಿದ್ದೀ ಮಾಡಪ್ಪ! ತೆಳ್ಳಗ ಗಂಜೀಮಾಡಿಕೊಂಡು ಬರ ತೇನಿ. ನಾ ಹೋಗಲ್ಯಾSSS? ರಂಗೂ, ಏ ರಂಗೂSSS.

**ರಂಗೂ :** ಯಾಕವ್ವSSS.

**ಮಾಲತಿ :** ಹೋಗವ್ವ, ಗಡಗೀ ತಕ್ಕೊಂಡು ಬಾ. (ರಂಗೂ ಹೊಗುವಳು) ಚಿಮ್ಮಣ್ಣಗSS ಸಕ್ಕರೀ ಹಾಕಿ ಗಂಜೀ ಮಾಡಿಕೊಡತೇನಿ. ಹೋಗಲ್ಯಾ ಚಿಮ್ಮಣ್ಣSSS?

**ಚಿದಂಬರ :** ಲಗೂ ಮಾಡಬೇಕು ಮತ್ತೆSS.

**ಮಾಲತಿ :** (ಹೋಗುತ್ತ ತನ್ನಷ್ಟಕ್ಕೆ ಎನ್ನುವಂತೆ) ಸೆರೆಗುಡುಕರ ಸಂಸಾರ! ಸಾವಿನ ದವಡೆಯಲ್ಲಿರುವ ಮಗುವಿಗೆ ಸೆರೆ ಅಂಬಲಿಯನ್ನೂ ಕುಡಿಸಲಿಕ್ಕೆ ಗತಿಯಿಲ್ಲ. ಬರೀ ಆಶೆಯನ್ನೇ ಅಗಿದು ಅರಗಿಸಿಕೊಳ್ಳಬೇಕು; ಅದರ ಬಲದಿಂದಲೇ ಕೊನೆಯ ಉಸಿರು ಕಳೆಯುವವರೆಗೂ ಬಾಳುವನ್ನು ತಳ್ಳಬೇಕು. ರಂಗೂ, ತಿಕ್ಕಿದ್ಯಾ ತಾಯಿ ಗಡಗೀನ್ನ ?

**ರಂಗೂ :** (ಒಳಗಿನಿಂದಲೇ) ತರತೇನಿ, ಅವ್ವಾ, ನೀ ಹಿಟ್ಟು ಸಕ್ಕರಿ ನಜ್ಜು ಮಾಡಿಕೋ.

**ಮಾಲತಿ :** ಹಿಟ್ಟು, ಸಕ್ಕರಿ! ಬಿಳಿಯ ಹೊಸ ಮಲಮಲನಂತೆ ತಿಳಿ ಯಾದ ಎದೆ ಅದು! ಬಡತನ ಭಂಡತನಗಳ ಕಪ್ಪು ಕಲೆಗಳು ಕುಳಿತಿಲ್ಲ, ಆ ಬಿಳಿ ಬಟ್ಟೆಯಮೇಲೆ! ಸೆರೆಗುಡುಕನ ಸಂಸಾರದ ದುರಂತಚಿತ್ರ ಆ ನಿರ್ಮಲ ನೇತ್ರಗಳಿಗೆ ಹೇಗೆ ಕಾಣಬೇಕು? ಹಿಟ್ಟು-ಸಕ್ಕರಿ......... ಸಂಜೆಯ ಊಟಕ್ಕೆ ಕುಚ್ಚಿಡಬೇಕೆಂದರೆ ಕಾಳು ಕೂಡ ಇಲ್ಲ! (ಗಾಡಿಯ ಸಪ್ಪಳು ಕೇಳುತ್ತಿದೆ) ಓ ಹೋ! ಸಂಜೆಯ ಅಯ್ದು ಗಂಟೆಯ ಗಾಡಿ ಬಂತು! ಕಚೇರಿಯಿಂದ ನೆಟ್ಟಗೆ ಮನೆಗೆ ಬರುತಾರೋ, ಸಾಲಗಾರರ ಕಾಟ ತಪ್ಪಿಸಲಿಕ್ಕೆ ಮತ್ತೆಲ್ಲಿಯಾದರೂ ಕುಡಿದು ಬೀಳುತಾರೋ! ಸಂಜೆ ಆಯ್ತು ಅಂದರೆ ಸಾಲಗಾರರ ಸೇಳಿದಾಟಕ್ಕೆ ಆರಂಭ. (ಹೊರಗೆ ನೋಡಿ)

ಯಾರೋ ಈ ಕಡೆಗೆ ಬರುವಂತೆ ಕಾಣ್ತದ. ಮುಖ ಮುಚ್ಚಿಕೊಂಡು ಅಡಿಗೀ ಮನಿಯೊಳಗಾದರೂ ಇದ್ದರಾಯ್ತು. (ಹೋಗುವಳು)

**ಶೀಲಭದ್ರ** : (ಬಂದು ಮನೆಯನ್ನು ನಿಟ್ಟಿಸುತ್ತ ನಿಟ್ಟುಸಿರು ಬಿಟ್ಟು) ಇದು ನನ್ನ ಅಕ್ಕನ ಮನೆಯೇ? ಅಥವಾ ತಪ್ಪಿ ಯಾರದಾದರೂ ಮನೆಯನ್ನು ಹೊಕ್ಕಿರುವೆನೇ? ಇಲ್ಲ, ಇಲ್ಲ; ಇದೇ ನನ್ನ ಅಕ್ಕನ ಮನೆ! ಅದೊ-ಎಂದೋ ಒಮ್ಮೆ ತವರುಮನೆಯಿಂದ ತಂದ ಸೀರೆಗಳು; ಈಗ ಹರಿದು ದಾರಿದ್ರ್ಯದ ದುರಂತ ಧ್ವಜದಂತೆ ಗಳದ ಮೇಲೆ ಹಾರಾಡುತ್ತಿವೆ! ಗಂಡ ಸುಶಿಕ್ಷಿತ ಪದ ವೀಧರ! ತಿಂಗಳಿಗೆ ೧೫೦ ಕ್ಕೂ ಕಡಿಮೆ ಸಂಬಳ ಸಿಕ್ಕಲಾರದು! ಮನೆಯ ಲ್ಲಿಯೋ— ನಾಲ್ಕೇ ಜನರು! ಆದರೂ ಮನೆಯಲ್ಲಿ ಈ ಬಡತನದ ಭೂತಾ ವೇಶವೇಕೆ? ಹಾಸುವದಕ್ಕಿಲ್ಲ! ಹೊದೆಯುವದಕ್ಕಿಲ್ಲ! ಕೂಲಿಕಾರರ ಗುಡಿ ಸಲಿಗಿಂತಲೂ ಕಡೆಯಾಗಿದೆ. ( ಮಾಲತಿ ಒಳಗಿನಿಂದ—ರಂಗೂ, ಲಗೂ ತಗೊಂಡು ಬಾರೇ ಗಡಗೀನ್ನss. ) ಗಡಗೀನ್ನ! ಅಡಿಗೆ ಮಾಡಲಿಕ್ಕೆ ಮಣ್ಣಿನ ಮಡಿಕೆ! ತಾಮ್ರ ಹಿತ್ತಾಳಿಯ ಪಾತ್ರೆಗಳೆಲ್ಲ ಎಲ್ಲಿ ಹೋದವು? ( ಮತ್ತೆ ಒಳಗಿಂದ: **ಮಾಲತಿ**—ಹಾಳಾದ ಮನೆಯೊಳಗ ಕೂಳು ಕುಚಿ ಗೊಂಡು ತಿಂದೇನಂದರ ಗಡಗೀಹೊರತು ಗತಿ ಇಲ್ಲಧಾಂಗಾಯಿತು. ಎಲೇ ರಂಗೀ, ಓಡತಾ ಬಾರೇss ) ( ಬಂದೆ ಅವ್ವಾ ಎನ್ನುತ್ತ ರಂಗೂ ಓಡಿ ಬರುವಳು. ಶೀಲಭದ್ರ—'ರಂಗೂ' ಎನ್ನುವ. ಹುಡುಗಿ ಆನಂದದಿಂದ "ಅವ್ವ, ಮಾಮಾss" ಎನ್ನುತ್ತಲೇ ಪರಕಾರ ಎಡವಿ ಬೀಳುವಳು. ಗಡಿಗೆ ಗಳು ಒಡೆಯುವುವು. )

**ಮಾಲತಿ** : (ಒಳಗಿಂದಲೇ ಬಯ್ಯುತ್ತ ಬರುವಳು) ಒಡೆದ್ಯಾ ರಂಡೇ, ಇದ್ದೆರಡು ಗಡಗೀನ್ನ! ಇನ್ನು ಯಾತರೊಳಗ ಕೂಳ ಕುಚ್......

**ಶೀಲಭದ್ರ** : ಹಾ, ಹಾಂ! ಮಾಲತೀ, ಎಷ್ಟದು ಸಿಟ್ಟು ಮಗುವಿನ ಮೇಲೆ! ಹರಕು ಪರಕಾರ ಕಾಲಿಗೆ ಸಿಕ್ಕಿಕೊಂಡಿತು ! ಗಡಿಗಿ ಒಡಿಯೋದು ಹಾಗಿರಲಿ, ಆಕೆಯ ತಲೆ ಒಡೀತಿತ್ತುss ! ಮೂರು ಕಾಸಿನ ಮಡಿಕೆ ಮಕ್ಕಳ ಜೀವಕ್ಕಿಂತ...... (ಮಾಲತಿ ದುಃಖಿಸುತ್ತ ಮೋರೆಯನ್ನು ಮುಚ್ಚಿಕೊಳ್ಳು ವಳು) ಅಳುವೆಯೇಕೆ ಮಾಲತೀ ? ಮೋರೆಯನ್ನು ಮುಚ್ಚಿಕೊಂಡರೆ

ಕಣ್ಣೀರು ಕಾಣಲಿಕ್ಕಿಲ್ಲ; ಬಿಗಿ ಹಿಡಿದರೂ ಬಾಯ್ದೆರೆದು ಬರುತ್ತಿರುವ ದುಃಖದ ದನಿಯನ್ನು ಹೇಗೆ ಅಡಗಿಸುವೆ? ಯಾಕೆ, ನಾನು ನಿಮ್ಮ ಮನೆಗೆ ಬರಬಾರದಾಗಿತ್ತೇ......?

**ಮಾಲತಿ:** ಈ ಬಂಡಬಾಳುವೆಯನ್ನು ನೋಡೋದಕ್ಕೆ? ನನ್ನ ದುರ್ದೈವ!

**ಶೀಲಭದ್ರ:** ದೈವವನ್ನು ದೂರಿಕೊಳ್ಳಬೇಡ ಮಾಲೂ! ಈ ದುರಂತಕ್ಕೆ ಬೇರಾವುದೋ ಕಾರಣವಿರಬೇಕು.

**ಮಾಲತಿ:** ಕುಳಿತಾದರೂ ಮಾತನಾಡಬಹುದಲ್ಲ, ಈ ಖುರ್ಚಿಯ ಮೇಲೆ!

**ಶೀಲಭದ್ರ:** (ಕುಳಿತು) ಅಯ್ಯೋ ಇದೇನು? ಕುಡಕನ ಕಾಲುಗಳಂತೆ ತತ್ತರಿಸುತ್ತಿವೆಯಲ್ಲ ಖುರ್ಚಿಯ ಕಾಲುಗಳು! ಎಂತಹ ಹರಕು ಮುರಕು ಸಂಸಾರ! ಅಕ್ಕ, ಭಾವನಿಗೆ ನೌಕರಿ ಇದೆ, ಅಲ್ಲವೇ?

**ಮಾಲತಿ:** (ಮನಸ್ಸಿಲ್ಲದೆ) ಹೂಂಽಽ!

**ಶೀಲಭದ್ರ:** ತಿಂಗಳಿಗೆ ಸಂಬಳವೆಷ್ಟು? ಗ್ರ್ಯಾಜ್ಯುಏಟನೆಂದ ಮೇಲೆ ೧೫೦ಕ್ಕೆ ಕಡಿಮೆ ಇರಲಾರದಷ್ಟೇ?

**ಮಾಲತಿ:** ಹೂಂಽಽ!

**ಶೀಲಭದ್ರ:** ಸಾಲಮೂಲಗಳೇನಾದರೂ ಇವೆಯೇ?

**ಮಾಲತಿ:** ಹೂಂಽಽಽ! (ನಿಟ್ಟುಸಿರು ಬಿಟ್ಟು ಕಣ್ಣೀರು ಒರೆಸಿಕೊಳ್ಳುವಳು.)

**ಶೀಲಭದ್ರ:** ಅಳುವೆಯೇಕೆ ಮಾಲೂ! ನೂರೈವತ್ತು ರೂಪಾಯಿ ನಾಲ್ವರ ಹೊಟ್ಟೆಗೆ ಸಾಲೋದಿಲ್ಲವೇ? ಸಾಲ ಯಾತಕ್ಕಾಗಿ?

**ಮಾಲತಿ:** ಅವರನ್ನೇ ಕೇಳಬೇಕು.

**ಶೀಲಭದ್ರ:** ನೀನು ಹೇಳೋದಿಲ್ಲವೇ?

**ಮಾಲತಿ:** ಪತಿನಿಂದೆಯನ್ನ ಮಾಡುವದು ಪರಮ ಪಾಪವಂತೆ.

**ಶೀಲಭದ್ರ** : ಶೀಲವತಿಯರಿಗೆ ಶೋಭಿಸುವ ಮಾತು! ಆದರೆ ಇದರಲ್ಲಿ ಪತಿನಿಂದೆಯ ಪ್ರಶ್ನೆಯೇ ಇಲ್ಲವಲ್ಲ! ತಮ್ಮನೆದುರಿಗೂ ಅಕ್ಕನ ಅಂತರಂಗವನ್ನು ಹೇಳಬಾರದೇ ?

**ಮಾಲತೀ :** ಹುಟ್ಟಿದ ಮನೆಗೆ ಹೊರತಾಗಿ ಕೊಟ್ಟಮನೆಯಲ್ಲಿ ಕಾಲಿಟ್ಟ ಮೇಲೆ, ನಾನು ನನ್ನತನಗಳನ್ನು ಮಾರಿಕೊಂಡಿರುವೆ. ಇದ್ದುದನ್ನು ಇದಿರಿಸುವ ಕಸುವನ್ನು ಕಳೆದುಕೊಂಡಿರುವೆ. ಇರಬೇಕಾದುದನ್ನು ಅಳವಡಿಸುವ ಇಚ್ಛಾ ಶಕ್ತಿಯನ್ನು ಇಲ್ಲದಂತೆ ಮಾಡಿರುವೆ. ಬಂದುದಕ್ಕೆ ಬಾಗಿ ಹೋಗಬೇಕೆನ್ನುವ ನಾರೀ ನೀತಿಯನ್ನು ಮಾತ್ರ ಕಲಿಯುತ್ತಿದ್ದೇನೆ.

**ಶೀಲಭದ್ರ :** ಹಿಂದೂ ಹೆಂಗಳೆಯರ ಹಣೆಬರಹ! ಗರತಿಯ ಗುಲಾಮತನ! ಹೆಣ್ಣಿನ ಹೃದಯಸಾಗರದಲ್ಲಿ ಉಕ್ಕಿಬರುವ ಆಶೆ ಆಕಾಂಕ್ಷೆಗಳ ಅಲೆಗಳು ತಟವನ್ನು ತಲ್ಪುವ ಮೊದಲೇ ಶಾಸ್ತ್ರಗಳ ಬಂಡೆಗಲ್ಲುಗಳಿಗೆ ಬಡಿದು ಬುರುಗು ಬಿಟ್ಟು ಹಿಂತಿರುಗಬೇಕಾಗಿದೆ ಸನಾತನ ಕಾಲದಿಂದಲೂ! ಇಂತಹ ನಿಸ್ಸತ್ವ ನಾರೀಗರ್ಭದಿಂದಲೇ ಉದಿಸಬೇಕಾಗಿದೆ, ನಮ್ಮ ಭಾವಿ ಭಾರತದ ರಾಷ್ಟ್ರವೀರರು—ಕಲ್ಲಿದ್ದಲಿಯ ಖಣಿಯಲ್ಲಿ ರತ್ನದಂತೆ! ಆದರೆ ಅಕ್ಕಾ, ನೀನು ಇಪ್ಪತ್ತನೆಯ ಶತಮಾನದ ಸ್ತ್ರೀಯಲ್ಲವೇ? ಸುಶಿಕ್ಷಿತಳಲ್ಲವೇ?

**ಮಾಲತಿ** : ಆದರೂ ಭಾರತೀಯಳೇ ಅಲ್ಲವೇ ?

**ಶೀಲಭದ್ರ** : ಭಾರತೀಯಳೇ ಆಗಿದ್ದರೆ ಬಾಳಿನಲ್ಲಿ ಬಂಗಾರದ ಬಣ್ಣವಿರಬೇಕಾಗಿತ್ತು!

**ಮಾಲತಿ** : ಮರಕ್ಕೆ ಸಿಡಿಲು ಹೊಡೆದಿರುವಾಗ ಅದನ್ನು ಅಪ್ಪಿದ ಬಳ್ಳಿಯೂ ಸುಟ್ಟುಹೋಗುವದು ಸ್ವಾಭಾವಿಕ. ಇನ್ನೆಲ್ಲಿ ಅದಕ್ಕೆ ಬಣ್ಣವೇರಿದ ಬಾಳು!

**ಶೀಲಭದ್ರ** : ಮಾಲತೀ, ನನ್ನಂತಹ ಕುಶಲ ನಾಟಕಕಾರನನ್ನೂ ಕಂಗೆಡಿಸುವ ಕಲೆಯ ಕುಸುರಿನ ಮಾತುಗಳನ್ನು ಆಡುತ್ತಿರುವಿ. ಎಂದಮೇಲೆ ಇಂತಹ ಬುದ್ಧಿವಂತರ ಭವ್ಯಭವನದಲ್ಲಿ ಬಡತನದ ಭೂತಾಟಿಕೆ ಏಕೆ? ಮನೆಯವರಿದಿರಿಗೂ ಮಾತಾಡಲಾರೆಯಾ ?

ಮಾಲತಿ : ಮಾತಿನಿಂದ ಮನವರಿಕೆ ಮಾಡಿಕೊಳ್ಳುವದಕ್ಕಿಂತ ಕೃತಿಯನ್ನೇ ಕಣ್ಣಾರೆ ಕಾಣುವದು ಲೇಸು !

ಶೀಲಭದ್ರ : ಹಾಗಾದರೆ ಭಾವ ಬರುವ ವೇಳೆಯಾಯಿತೇ ?

ಮಾಲತಿ : ತೇರಿ ಬಿಡುವ ವೇಳೆಯಾಯಿತು ಮಿತ್ರ ! ಇವರೇನು ಬರುವರೋ ಇಲ್ಲವೋ !

ಶೀಲಭದ್ರ : ನಿನ್ನ ಉತ್ತರಗಳಿಂದ ಸಂಶಯ ಮತ್ತೆ ಮತ್ತೆ ಕೆರಳುತ್ತಿದೆ. ಅಂತರಂಗದ ಹೊರಗೆ ಬರಬೇಕೆನ್ನುವ ಹಂಬಲದ ಬುಗ್ಗೆಯನ್ನು ಬಲವಂತವಾಗಿಯೇ ಒತ್ತಿಡುತ್ತಿರುವಿ (ಅಷ್ಟರಲ್ಲಿ ಅವ್ವಾ, ಎಂದು ತಿಮ್ಮ ಒದರುತ್ತಾನೆ.)

ಮಾಲತಿ : ಬಂದೆ, ಬಂದೆ ನನ್ನಪ್ಪ......

ಶೀಲಭದ್ರ : ತಿಮ್ಮ ಒಳಗೇಕಿದ್ದಾನೆ ? ಮೈಯಲ್ಲಿ ಸ್ವಸ್ಥ

ಮಾಲತಿ : ಜ್ವರಬಂದು ಎಂಟು ದಿನಗಳಾದವು. (ಮತ್ತೆ ಅವ್ವಾ, ಎಂಬ ದನಿ) ಬಂದೆ, ಬಂದೆ; ಇಲ್ಲಿಯೇ ತರುವೆ ಶೀಲಾ ಅವನನ್ನು (ಒಳಗೆ ಹೋಗುವಳು)

ಶೀಲಭದ್ರ : (ದಿಙ್ಮೂಢನಾದಂತೆ) ಅವ್ವಾಽಽ ! ಎಂತಹ ಕರುಣದ ಕೂಗು ! ಕೇಳಿದವರ ಕರುಳನ್ನು ಕೊರೆಯುತ್ತಿದೆ; ಹೆತ್ತೊಡಲಿಗಂತೂ ಹುರಿಯೋಡಿನಲ್ಲಿ ಹಾಕಿದಂತೆಯೇ ಆಗಿರಬೇಕು. ರಂಗೂ......

ರಂಗೂ : ಏನು ಮಾಮಾ ?

ಶೀಲಭದ್ರ : ದಿನಾಲು ಡಾಕ್ಟರರು ಬರುತಾರೆಯೋ ನಿಮ್ಮ ಮನೆಗೆ ?

ರಂಗೂ : ಇಲ್ಲ.

ಶೀಲಭದ್ರ : ನೀವೇ ಇವನನ್ನು ದವಾಖಾನೆಗೆ ದಿನಾಲು ಕರಕೊಂಡು ಹೋಗುತೀರಾ ?

ರಂಗೂ : ಇಲ್ಲ.

ಶೀಲಭದ್ರ : ಹಾಗಾದರೆ, ಅಪ್ಪನೇ ಔಷಧವನ್ನು ತಂದು ಕೊಡು-ತಾನೆಯೇ ?

ರಂಗೂ : ಇಲ್ಲ.

ಶೀಲಭದ್ರ : ಔಷಧವನ್ನು ಯಾರೂ ಕೊಟ್ಟೇ ಇಲ್ಲವೇ ?

ರಂಗೂ : ಇಲ್ಲ.

ಶೀಲಭದ್ರ : (ತನ್ನಷ್ಟಕ್ಕೆ) ಇಲ್ಲ. ಇಲ್ಲ. ಇಲ್ಲ. ಯಾವದೂ ಇಲ್ಲ. ಹಾಗಾದರೆ ನುಗೂ ಬದುಕ್......

(ಮಾಲತಿ ಮಗುವನ್ನು ಎತ್ತಿಕೊಂಡು ಬರುವಳು)

ಮೈ ಕೈ ಸರಿಯಾಗಿ ಮುಚ್ಚು ಮಾಲೂ !

ಶೀನ್ಮ : ಅವ್ವಾ ನೀರುsss.

ಮಾಲತಿ : ನೀರು ಕುಡಿಯ ಬಾರದಪ್ಪ ! ಜ್ವರ ಇಳಿಯಲಿ ! ಆ ಮೇಲೆ......

ಶೀಲಭದ್ರ : ಶುಸು ಕಾಫಿ ಮಾಡಿಕೊಡಬಹುದಲ್ಲ !

ಮಾಲತಿ : ಕಾsss ಫಿsss !

ಶೀಲಭದ್ರ : ಕಾಫಿ ಇಲ್ಲದಿದ್ದರೆ ಹಣ್ಣಿನ ರಸವನ್ನು ಕೊಡಬಹುದು!

ಮಾಲತಿ : ಹssಣ್ಣುss !! (ಕಣ್ಣೀರುದಿರಿಸುವಳು)

ಶೀಲಭದ್ರ : ಮಾತಿಗೊಮ್ಮೆ, ಮಾಲತೀ, ಗಂಗಾ ಯಮುನಾ ಪ್ರವಾಹವನ್ನು ಹರಿಸುವೆಯಲ್ಲ ! ಡಾಕ್ಟರರೇನಾದರೂ ಹೆದರಿಕೆಯನ್ನು ಹೇಳಿದ್ದಾರೆಯೇ ?

ಮಾಲತಿ : ಇಲ್ಲ. ನಮ್ಮ ಡಾಕ್ಟರರು ದವಾಖಾನೆಯಲ್ಲಿಲ್ಲ; ದೇವಾಲಯದಲ್ಲಿದ್ದಾನೆ. ಆತನ ಭಸ್ಮವೇ ನಮ್ಮಂಥವರಿಗೆ ಗತಿ !

ಶೀಲಭದ್ರ : ದೇವರ ಅಂಗಾರದಿಂದ ಬೇನೆ ಬಯಲಾಗುವದೇ ?

ಮಾಲತಿ : ಯಾಕೆ ? ಮುಖ್ಯಪ್ರಾಣದೇವರ ಕಣ್ಣಿಗೆ ಕಾಣಲಿಕ್ಕಿಲ್ಲವೇ ನಮ್ಮಂತಹ ಬಡವರು ?

**ಶೀಲಭದ್ರ** : ಕಾಣದೆ ಏನು ? ಕಾಣುವ ಕಣ್ಣಿನ ಕಡೆಗೆ ಬರುವ ಬಡವರ ಬೆನ್ನೆಲುವನ್ನು ಮುರಿಯಲಿಕ್ಕೆ ಕೈಯಲ್ಲಿ ಕೊಡತಿಯನ್ನು ಎತ್ತಿ ಕೊಂಡೇ ನಿಂತಿರುತ್ತಾನೆ. ಕಾಣದ ಕಣ್ಣಿನ ಕಡೆಗೆ ಬರುವ ಸಿರಿವಂತರನ್ನ ಹೆಗಲ ಮೇಲೆ ಹತ್ತಿಸಿಕೊಳ್ಳುವದಕ್ಕೆ ಕಾಲನ್ನು ಮಡಿಚಿ ಕೈಯನ್ನು ಟೊಂಕದ ಮೇಲಿಟ್ಟು ಪಾವಟಿಗೆಗಳನ್ನು ಮಾಡಿಕೊಂಡಿದ್ದಾನೆ. ಕಲಿಯುಗ ದೊಳಗಿನ ದೇವರೆಲ್ಲ ಬಂಡವಲಿಗರ ಬೆಂಬಲಕ್ಕೆ. ಕಾಸಿಲ್ಲದವರ ಕೈವಾರಿ ಗಳಲ್ಲಿ ಅವರು ! ಬೇನೆಬಂದಾಗ ಬೂದಿಯನ್ನು ಬಡಿಯಬೇಕೆನ್ನುವ ಬುದಿ ಗೇಡಿತನವನ್ನು ಯಾರು ಹೇಳಿದರು ನಿಮಗೆ ?

**ಮಾಲತಿ** : ಆ ಬೂದಿಯನ್ನು ಬಿಟ್ಟರೆ, ಯಾವ ಡಾಕ್ಟರು ಬರುತಾರೆ ನಮ್ಮ ಮನೆಗೆ?

**ಶೀಲಭದ್ರ** : ಫೀ ಕೊಟ್ಟರೆ ಯಾರು ಬೇಕಾದರೂ ಬರುತಾರೆ!

**ಮಾಲತಿ** : ಫೀ ಕೊಟ್ಟರೆ......! ಕೊಡುವದಕ್ಕೆ ಕೈಯಲ್ಲಿ ಕಾಸು ?

**ಶೀಲಭದ್ರ** : ಮತ್ತೆ ಮಾತಿನಲ್ಲಿ ತೊಡಕನ್ನು ತರಬೇಡ ಮಾಲತೀ ! ಸ್ಪಷ್ಟವಾಗಿ ಹೇಳು; ಮಗುವಿಗೆ ಉಪಚಾರ ಮಾಡಿಸಲಾಗದಷ್ಟು ಬಡತನ ಬಂದಿದೆಯೆ ನಿಮಗೆ?

**ಮಾಲತಿ** : ಬಂದಿಲ್ಲ; ತಂದುಕೊಂಡಿದ್ದೇವೆ.

**ಶೀಲಭದ್ರ** : ಈ ಕಷ್ಟದ ಕಾಲ ನಾವು ತಂದುಕೊಂಡುದಲ್ಲ. ತಾನಾ ಗಿಯೇ ಬಂದಿದೆ; ಅಥವಾ ಅದನ್ನು ತಂದವರೇ ಬೇರೆ.

**ಮಾಲತಿ** : ಬೇರೆಯವರಲ್ಲ; ನಮ್ಮವರೇ! ನಮ್ಮ ಮನೆಯವರೇ!

**ಶೀಲಭದ್ರ** : ಮತ್ತೆ ಮಾತಿನ ಮುಂಡಿಗೆ! ಇರಲಿ, ಮಗುವನ್ನು ಮುಂದೆ ಮಾಡು ನೋಡೋಣ! ಬಾಪ್ಪ ಚಿಮ್ಮಣ್ಣ ! ಎಷ್ಟು ಸೊರಗಿದ್ದೀ ಯಲ್ಲೋ! ಮಾಲತೀ, ಜ್ವರ ಒಂದೇ ಸವನೆ ಇದೆಯೋ? ಆರಿ ಆರಿ ಬರುತಿವೆಯೋ ?

**ಮಾಲತಿ** : ಆರಿ ಆರಿ ಬರುತಿವೆ.

ಶೀಲಭದ್ರ ; ಬೆದರುವ ಕಾರಣವಿಲ್ಲ. ಮಲೇರಿಯಾ ಜ್ವರ. ಈಗ ಹೋಗಿ ಡಾಕ್ಟರರನ್ನು ಕಳಿಸುತೇನೆ; ಹಣ್ಣುಗಳನ್ನೂ ತಕ್ಕೊಂಡು ಬರುತೇನೆ. ಹೋಗು, ಒಳಗೆ ಮಲಗಿಸು. ಈಗ ಹಣ್ಣು ತರುತೇನೆ ಚಿಮ್ಮಣ್ಣ ! ನಾನು ಬರೋವರೆಗೂ ಸುಮ್ಮನೇ ಮಲಗಬೇಕು.

ಚಿದಂಬರ : ಮತ್ತೆ ಪೇಪರಮಿಂಟ, ಬಿಸ್ಕಿಟು.........

ರಂಗು : ಮಾಮಾ ನನಗೂ.........

ಶೀಲಭದ್ರ : ಇಬ್ಬರಿಗೂ ತರತೇನಿ. (ಮಾಲತಿ ಒಳಗೆ ಹೋಗುವಳು) ರಂಗೂ, ಮೈಮೇಲೆ ಬಟ್ಟೆ ಎಷ್ಟು ಹೊಲಸಾಗಿವೆಯಲ್ಲಮ್ಮ ! ಮತ್ತೊಂದು ಹಾಕಿಕೊಳ್ಳಬೇಕಾಗಿತ್ತು ?

ರಂಗು : ಭಿಟ್ಟು ತೊಡಲಿಕ್ಕೆ ಮತ್ತೊಂದಿಲ್ಲ !

ಶೀಲಭದ್ರ : ನಿಮ್ಮ ತಂದೆಗೆ ಹೇಳಬೇಕಾಗಿತ್ತು, ಹೊಸದೊಂದು ಹೊಲಿಸಿ ಕೊಡು ಅಂತ !

ರಂಗು : ಹೇಳ್ಳಿಕ್ಕೆ ಹೋದರೆ ಹೊಡೀಲಿಕ್ಕೆ ಬರುತಾನೆ, ರೊಕ್ಕ ಇಲ್ಲ ಅಂತ.

ಶೀಲಭದ್ರ : ಮತ್ತೆ ಬಂದ ಸಂಬಳ ಎಲ್ಲ ಏನು ಮಾಡುತಾನೆ ನಿಮ್ಮಪ್ಪ ?

ರಂಗು : ಸೆರೆ ಕುಡಿದು ಹಾಳು ಮಾಡುತಾನೆ.......

( ಏ ಹುಚ್ಚು ಮುಂಡೇ ಎಂದು ಮಾಲತಿ ಒಳಗಿನಿಂದಲೇ ಬೆದ್ರಿಸುವಳು )

ಶೀಲಭದ್ರ : ( ಉತ್ತೇಜಿತನಾಗಿ ) ಮಾತಾಡು, ಮಾತಾಡು ನನ್ನ ಅರಗಿಳೀ, ಮಾತಾಡು ! ಈಗಲೀಗ ಸತ್ಯದ ಸೆಲೆಯೊಡೆಯಿತು ! ಮತಿಗೆ ಮುಸುಕಿದ ಮಂಕು ಮಾಯವಾಯಿತು ! ಸೆರೆ ಕುಡಿದು....... ! ಹೌದು ಹೌದು! ಆ ಸುರಾಮರಿಯೇ ಈ ಬಂಗಾರದಂತಹ ಬಾಳುವೆಯನ್ನು ಬಣ್ಣಗೆಡಿಸಿದ್ದಾಳೆ! ನಲಿವಿನ ನಂದಗೋಕುಲವನ್ನು ಮರುಳುಗಳ ಮಸಣವನ್ನು ಮಾಡಿದ್ದಾಳೆ ! ಸೆರೆ; ಸೆರೆ ಕುಡಿದವ ಬಡತನದ ಬ್ರಹ್ಮರಾಕ್ಷಸನ

ಕೈಸೆರೆ! ಮದ್ಯದ ಮಹಾಮಾರಿ! ಇದರಿಂದಲೇ ಹೋಗುವದು ಇದ್ದುದೆಲ್ಲ ಮಾರಿ! ಸಿಕ್ಕುವದು ದಾರಿದ್ರ್ಯಕ್ಕೆ ದಾರಿ! ಅಕ್ಕಾ, ಅಕ್ಕಾ......

**ಮಾಲತಿ :** (ಒಳಗಿನಿಂದ ಬರುವಳು) ಹೀಗೇಕೆ ಹುಚ್ಚನಂತೆ...

**ಶೀಲಭದ್ರ :** ಹುಚ್ಚ! ಅಲ್ಲ! ಹುಚ್ಚು ನಿಚ್ಚಳವಾಯಿತು! ಇನ್ನೂ ನಿಚ್ಚಳವಾಗಬೇಕು. ಮಾಲೂ, ಈ ಮಾತನ್ನು ಮೊದಲೇ ಏಕೆ ತಿಳಿಸಲಿಲ್ಲ?

**ಮಾಲತಿ :** ಯಾರಿಗೆ ತಿಳಿಸಬೇಕು? ಅವರು ಯಾರ ಮಾತನ್ನೂ ಕೇಳುವ ಹಾಗಿಲ್ಲ!

**ಶೀಲಭದ್ರ :** ನನಗೆ ತಿಳಿಸಬೇಕಾಗಿತ್ತು! ನಾನು ಬಂದು......

**ಮಾಲತಿ :** ಯಾರು ಏನು ಹೇಳಿದರೂ ಹಾದಿಗೆ ಬಾರದಷ್ಟು ಕೈ ಮೀರಿ ಹೋಗಿದೆ ಅವರ ಕುಡುಕತನ! ತಂದೆಯವರಿಗಂತೂ ತಿಳಿಸೋ ಹಾಗಿಲ್ಲ ಈ ಮಾತನ್ನು! ಇಲ್ಲವಾದರೆ, ಇದ್ದೊಬ್ಬ ಮಗಳ ಗತಿ ಹೀಗಾಯಿತಲ್ಲ, ಎಂದು ಈ ಮುಪ್ಪಿನ ಕಾಲದಲ್ಲಿ ಎದೆಯೊಡೆದೇ ಪ್ರಾಣಬಿಡುವರು. ನಿನಗೆ ತಿಳಿಸಬೇಕೆಂದರೆ......! ನೀವು ನಾಟಕಕಾರರು! ಕಂಪನಿ ಹೋದೆಡೆಯಲ್ಲಿ ನಿಮ್ಮ ಬಿಡಾರ! ಮೊನ್ನೆ ನಾಟಕದ ಕೈಕಾಗದ ನೋಡಿದೆ—ನೀ ಬರೆದ ನಾಟಕ ಬೇಗನೆ ರಂಗಭೂಮಿಯ ಮೇಲೆ ಬರೋದದೆ ಅಂತ; ಅಂದ ಮೇಲೆ ನೀನು ಇಲ್ಲಿಗೆ ಬರಬಹುದು ಅಂತ ತಿಳಕೊಂಡೆ!

**ಶೀಲಭದ್ರ :** ಅಹುದು, ಈ ಹೊತ್ತೇ ನಾನು ಬರೆದ ನಾಟಕ ಸ್ಟೇಜ ಆಗತದೆ. (ತೆರೆಯಲ್ಲಿ ಬಾಂಡ ವಾದ್ಯ) ಓಹೋ! ಹಾಂಡಬಿಲ್ ಹಂಚೋದಕ್ಕೆ ಹೊರಟರು ಅಂತ ಕಾಣುತದೆ! ( ಕೇಳಿರಿ, ಕೇಳಿರಿ! ಇಂದು ರಾತ್ರಿ ೧೦ ಘಂಟೆಗೆ ನವಜೀವನ ನಾಟ್ಯ ಮಂದಿರದಲ್ಲಿ ನಟರಾಜ ನಾಟಕ ಮಂಡಲದವರು ಸುಪ್ರಸಿದ್ಧ ನಾಟಕಕಾರ ಶೀಲಭದ್ರರಿಂದ ಬರೆಯಲ್ಪಟ್ಟ "ಗಟಾರದಲ್ಲಿ ಗಣಪತಿ" ಎಂಬ ಅಭಿನವ ಸಾಮಾಜಿಕ ನಾಟಕವನ್ನು ಅಭಿನಯಿಸುವರು. ಕುಡುಕತನದ ಕೆಡುಕುಗಳನ್ನು ಕಂಡವರ ಕರುಳು ಕೊರಿಯುವಂತೆ ಕೋರಯಿಸಿದೆ ಈ ನಾಟಕದಲ್ಲಿ. ಅಬಕಾರಿ ಮಂತ್ರಿಗಳ ಅಧ್ಯಕ್ಷತೆಯಲ್ಲಿಯೇ ಪ್ರಥಮ ಪ್ರಯೋಗ! ವಿಶೇಷ ಜನದಟ್ಟಣೆಯಾಗುವದು. ಮೊದಲೇ ಸ್ಥಳವನ್ನು ಕಾಯ್ದಿರಿಸಿರಿ— ಮತ್ತೆ ಬ್ಯಾಂಡ )

**ಮಾಲತಿ :** ( ನಗುತ್ತ ) ನಿನ್ನ ಹುಡುಗಾಟಿಕೆಯನ್ನು ಕಡೆಗೂ ಬಿಡಲಿಲ್ಲ, ಶೀಲಾ. ಗಟಾರದಲ್ಲಿ ಗಣಪತಿ! ಗೌರೀ ಗಂಗಾದೇವಿಯರ ಮಡಿಲಿನಲ್ಲಿ ಮುಳುಗುವದನ್ನು ಬಿಟ್ಟು ಗಟಾರದಲ್ಲೇಕೆ ಬಿದ್ದ ಗಣಪತಿ?

**ಶೀಲಭದ್ರ :** ಬೊಜ್ಜನ್ನು ಬೆಳೆಯಿಸಿಕೊಳ್ಳಲು ಪಶುವಿನ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡರೆ ನಡುಬೀದಿಯಲ್ಲಿಯೇ ಅಪಹಾಸ್ಯಕ್ಕೆ ಈಡಾಗಬೇಕಾದಿತು ಎಂದು ಎಚ್ಚರಿಸುವ ರೂಪವನ್ನು ತಾಳಿದ ಗಜಮುಖನಲ್ಲ ಈ ಗಣಪತಿ; ಮನುಷ್ಯನಾಗಿದ್ದರೂ ಮದ್ಯಸೇವನೆಯಿಂದ ಪಶುವಿಗಿಂತಲೂ ಪಶುವಾಗಿ, ಗಂಗಾದೇವಿಯ ಬದಲು ಗಟಾರದಲ್ಲಿ ಬೀಳುತ್ತಾನೆ, ಈ ಗಣಪತಿ !

**ಮಾಲತಿ :** ಹಾಗಾದರೆ ನಮ್ಮವರನ್ನು ಕರಕೊಂಡು ಹೋಗು ಈ ಹೊತ್ತಿನ ನಾಟಕವನ್ನು ನೋಡುವದಕ್ಕೆ.

**ರಂಗೂ :** ಮಾಮಾ, ನಾನೂ ಬರತೇನಿ ನಾಟಕಾ ನೋಡಲಿಕ್ಕೆ!

**ಶೀಲಭದ್ರ :** ನೀನಿಲ್ಲದೆ ನಾಟಕ ಎಲ್ಲಿ ಆಗತದೆ! ನೀ ಶಕುಂತಲಾ, ನಾನು ದುಷ್ಯಂತ. ಇಬ್ಬರೂ ಕೂಡಿಯೇ ಕುಣಿಯೋಣಂತೆ ನಾಟಕದೊಳಗ! ಅಕ್ಕಾ, ನಾ ಬರತೇನಿ. ಭಾವನಿಗೆ ಮನೆಯೊಳಗೇ ಇರಲಿಕ್ಕೆ ಹೇಳು.

**ಮಾಲತಿ :** ಮತ್ತೆ ಲಗೂನೆ ಬಂದುಬಿಡು ಊಟಕ್ಕೆ.

**ಶೀಲಭದ್ರ :** ಇಲ್ಲ; ರಾತ್ರಿ ನಿದ್ದೆ ಕಾಯೋದು. ಕಂಪನಿಯೊಳಗೇ ಸ್ವಲ್ಪ ಫರಾಳ ಆಗಿರತದೆ. ಮತ್ತೆ ನಾ ನಾಟಕಕಾರ ಅಂತ ಮಂತ್ರಿಗಳನ್ನ ಬೇರೆ ಕಾಣಬೇಕು. ಭಾವನಿಗೆ ಬೇಗನೆ ಊಟಮಾಡಲಿಕ್ಕೆ ಹೇಳು. ನಾಟಕಕ್ಕೆ ಕರಕೊಂಡು ಹೋಗತೇನಿ.

**ಮಾಲತಿ :** ಅವರು ಮನೆಗೆ ಬಂದರೆ.........

**ಶೀಲಭದ್ರ :** ಬಂದರೆ,— ಅಂದರೆ?

**ಮಾಲತಿ :** ಸಂಜೆ ಆಯಿತೆಂದರೆ ನಮ್ಮ ದುರ್ದೈವದ ದಶಾವತಾರ ನಾಟಕದೊಳಗಿನ ದುರಂತ ಪಾತ್ರಗಳ ಪ್ರವೇಶಕ್ಕೆ ಆರಂಭ ಆಗತದ......!

**ಶೀಲಭದ್ರ :** ಮತ್ತೆ ಹೊಸ ವಿಷಯವನ್ನೆತ್ತಿದೆಯಲ್ಲ, ಮಾಲತೀ!

**ಮಾಲತಿ :** ಒಡಲುರಿಯನ್ನು ಒಡಹುಟ್ಟಿದವರಲ್ಲಲ್ಲದೆ ಬೇರೆ ಯಾರಲ್ಲಿ ತೂರಿಕೊಳ್ಳಲಿ ಶೀಲಾ! ತಡೆಹಿಡಿದ ನೀರು ಒಡ್ಡನ್ನೇ ಒಡೆದು ಹೊರಬೀಳು ವಂತೆ, ಬೇಡ ಬೇಡವೆಂದರೂ ಬಾಯ್ದೆರೆಯನ್ನು ಬಿಟ್ಟು ಬೈಲಿಗೆ ಬರುತ್ತಿವೆ ಮಾತುಗಳು! ಸಾಲ ಕೊಟ್ಟುದಕ್ಕೆ ಎಡತಾಕುವ ಸಾವಕಾರರು ಒಬ್ಬರೇ ಇಬ್ಬರೇ! ಕಿರಾಣಿ ಅಂಗಡಿ ಶೆಟ್ಟಿ, ಜವಳಿ ಅಂಗಡಿ ಮಾರವಾಡಿ, ಕೊನೆಗೆ ಪಠಾಣರಲ್ಲಿ ಕೂಡ ಸಾಲತೆಗೆದಿದ್ದಾರೆ ಸೆರೆಗುಡುಕತನಕ್ಕೆ !

**ಶೀಲಭದ್ರ :** ಪಠಾಣರಲ್ಲಿಯೇ? ( ಉದ್ಭ್ರಾಂತನಂತೆ ) ಪಠಾಣ! ಪಠಾಣ! ಪ—ಠಾ—ಣ !

**ಮಾಲತಿ :** ಅವರಲ್ಲದೆ ಇಂಥ ಸೆರೆಗುಡುಕರಿಗೆ ಸಾಲಕೊಡುವ ದಾನಶೂರ ಯಾರು? ಇದ್ದ ಬಿದ್ದ ದಾಗೀನೆಗಳೆಲ್ಲ ಮಾರವಾಡಿಯ ಮನೆ ಸೇರಿದವು. ಆದರೂ ಕುಡುಕತನ ಬಿಡಲಿಲ್ಲ. ಕೊನೆಗೆ ಪಠಾಣನೇ ಗತಿ ಯಾದ. ದಿನಾ ಸಂಜೆಯಮುಂದೆ ಅವರೆಲ್ಲ ಆಡುವ ಹೀನ ಮಾತು ಕೇಳಿ ದರೆ ಜೀವ ಇಟ್ಟುಕೊಳ್ಳಬಾರದು, ಅನಿಸತದೆ. ಮಕ್ಕಳ ಮುಖ ನೋಡಿ ಕೊಂಡು......(ಗದ್ಗದದನಿ). ಆ ಪಠಾಣ ಸಾವಕಾರ ದಿನಕ್ಕೊಮ್ಮೆ ಯಮ ದೂತನಂಥ ಪಠಾಣ ಆಳನ್ನು ಕಳಿಸುತಾನೆ! ಎಷ್ಟು ಜನ ಇದ್ದಾರೋ ಅವನ ಹತ್ತರ! ಈ ಸಾರೆ ಪಠಾಣ ಬಂದರಂತೂ ಇವರ ಅವತಾರವೇ ಮುಗೀತದೆ ( ಮತ್ತೆ ಗದ್ಗದ ).

**ಶೀಲಭದ್ರ :** ಅಳಬೇಡ ನಾನಿನ್ನೂ ನಾಲ್ಕಾರುದಿನ ಇಲ್ಲಿಯೇ ಇರುವೆ. ಅಷ್ಟರಲ್ಲಿ ಭಾವನನ್ನು ಸುರಕ್ಷಿತ ಹಾದಿಗೆ ಹಚ್ಚಿಯೇ ಹೋಗುತ್ತೇನೆ. ಈಗ ಮಗುವಿನ ಹತ್ತರ ಇರು, ಡಾಕ್ಟರರನ್ನು ಕಳಿಸುತೇನೆ. ನಾ ಬೇಗನೆ ಬರುತೇನೆ. (ಹೋಗುವನು)

**ಮಾಲತಿ :** ಒಡಹುಟ್ಟಿದವರು ಬಂದಾಗ ಊಟಕ್ಕೆ ಕರೆದೇನೆಂದರೆ ತುತ್ತು ಅನ್ನಕ್ಕೂ ಗತಿಯಿಲ್ಲ. ಆದರೂ ನನ್ನ ಭಾಗ್ಯವೆನ್ನಬೇಕು, ಇಂತಹ ತಮ್ಮ ದೊರೆತದ್ದು ! (ಹೊರಗೆನೋಡಿ) ಯಾರವರು ? ಕಿರಾಣಿ ಅಂಗಡಿ ಸೆಟ್ಟಿ ! ಮೂರುಸಂಜೆಯ ಹೊತ್ತಿನೊಳಗೆ ಯಾವ ಮುಕ್ತಾಫಲಗಳನ್ನು ಸುರಿಸಿ ಹೋಗ ತಾನೋ ಏನೋ ! (ಸೆಟ್ಟಿ ಬರುವನು)

ಸೆಟ್ಟಿ : ಅದಾರೇನ್ರೆವಾಽ ನಿಮ್ಮ ರಾಯ್ರು ?

ಮಾಲತಿ : ಇನ್ನೂ ಬಂದಿಲ್ಲ ಮನೆಗೆ.

ಸೆಟ್ಟಿ : ಕವಳದಾಗೂ ಬರೀತಾರೋ ಏನೋ ಕಚೇರೀನ್ನ! ಸೆರೇದ ಬಾಟ್ಲಿ ಕಿಸೇದಾಗಽ ಇಟಗೊಂಡು ಹೋಗಿರತಾರ ಕಾಣತೈತಿ. ಕುಡಿದು ಕಾಂಪೌಂಡಿನಾಗ ಬಿದ್ದರು ಅಂದರ ಬೆಳಗಿನ ತಂಗಾಳಿ ಬೀಸಿದ ಮ್ಯಾಲೇ ಮನೀಗೆ ಬರೋದು. ಕೊಟ್ಟವರ ಗಂಟು ಮುಳುಗಿಸಾಕ ಭೇಶ್ ಹಂಚಿಕೀ ಹುಡುಕೀರಿ !

ಮಾಲತಿ : ನಿಮ್ಮ ದುಡ್ಡೇನು ಇಟಗೊಳೋದಿಲ್ರೆಪಾ ! ಯಾಕಷ್ಟು ಅಕಳ್ಳಽಸಕಳ್ಳಽ ಮಾತಾಡತೀರಿ !

ಸೆಟ್ಟಿ : ಮಾನವಂತ ಮನೆತನ ಅಲ್ಲವೇ ? ನಿಮ್ಮಂಥ ಕುಡುಕರಿಗೆ ನಾಲಾಕೊಟ್ಟು ನಾವೇ ಮಾನಗೇಡಿ ಆಗೋಹೊತ್ತು ಬಂದೈತಿ! ನಿಮ್ಮ ರಾಯರಿಗಂತೂ ಸೆರೇದ ಸಂಪತ್ತಿನ್ಯಾಗ ಸಾಲ ಸಂಬಂಧ ಎಲ್ಲ ಮರೀತಿದ್ದೀತು ! ನಿಮಗರ ಒಂದೀಟು ಮಾನ ಮರ್ಯಾದೆ ಅರವು ಇದ್ದರಽ ಕೂಲಿ ಕುಂಬಳಿ ಮಾಡಿಯಾದರೂ ಮುಟ್ಟಿಸಿರಿ, ನಮ್ಮ ಹಣಾನ್ನ !

ಮಾಲತಿ : ಎಷ್ಟು ದೂರ ಹರಿಬಿಡಿತೀರಿ ಬಾಯಿಽ......?

ಸೆಟ್ಟಿ : ದುಡಿದ ಗಂಟ್ರೀ ಅದುಽ......! ಹೊಟ್ಯಾಗ ಎಬ್ಬಿಸತೈತಿ ಉರೀನ್ನ! ಕೂಲಿ ಮಾಡ್ರಿ ಅಂದ್ರ ನಿಮಗ ಎಂಥಾ ಸಿಟ್ಟು ಬಂತು! ನಾವು ಕೈಯಾರೆ ಬಾಕಿಕೊಟ್ಟು, ಮ್ಯಾಲೆ ಕೂಲಿ ಇಲ್ಲದೆ ನಿಮ್ಮ ಮನೀಗೆ ಎಡತಾಕತೇವಲ್ಲ: ನಮಗೆಷ್ಟು ಬಂದೀತು ಸಿಟ್ಟು !

ಮಾಲತಿ : ಆತು; ಬಂದಮ್ಯಾಲ ಹೇಳ್ತೀನಿ. ಅವರಿಗೆ......

ಸೆಟ್ಟಿ: ನೀವ್ಯಾಕ ಹೇಳತೀರಿ! ನಾಳೆ ಆಳಮಗನ್ನಽ ಕಳಿಸತೇನಿ ಕಚೇರಿಗೆ. ಅಲ್ಲೇ ನಾಲ್ಕು ಮಂದೀಮುಂದ ಎಳದಾಡಿದಽ ಅಂದ್ರ ಬುದ್ಧಿ ಬರತೈತಿ, ನಿಮ್ಮ ಸೆರೆಗುಡಕ ರಾಯರಿಗೆ.

ಮಾಲತಿ : ನಿಮಗ ಕೈ ಮುಗೀತೇನಿ; ಅಷ್ಟು ಮಾತ್ರ ಮಾಡಬ್ಯಾಡ್ರಿ. ಏನಾದರೂ ಮಾಡಿ ಲಗೂನೇ ನಿಮ್ಮ ಬಾಕಿ ತೀರಿಸಲಿಕ್ಕೆ ಹೇಳತೇನಿ.

**ಸೆಟ್ಟಿ :** ಆತು; ಇದೊಂದು ವಗಾರದ ದಾರೀ ನೋಡತೇನಿ. ಅದಕ್ಕೂ ಬರಲಿಲ್ಲ ಅಂದರ, ತೋರಸತೇನಿ ಈ ಸೆಟ್ಟೀ ಕೈ! ಕುಡಕರ ಸಹವಾಸ ಮಾಡಿದ್ದೇ ತಪ್ಪಾಗ್ಯೆತಿ. ಬಂದ ಮ್ಯಾಲ ಹೇಳ್ರಿ ಒಂದೀಟು. ಈಗಂತೂ ಹೋಗತೇನಿ. (ಹೋಗುವನು)

**ಮಾಲತಿ :** ಕುಡಕನ ಹೆಂಡತಿ, ಅವಳಿಗೆ ಕೂಲಿಕುಂಬಳಿಯೇ ಗತಿ! ಮೂರುಸಂಜೆ ಹೊತ್ತಿನಲ್ಲಿ ಎಂತಹ ಭೀಕರ ಭವಿಷ್ಯವನ್ನು ನುಡಿದನಲ್ಲ ಸೆಟ್ಟಿ! ರಂಗೂ, ಚಿಮಣೀ ಹಚ್ಚಿಡು ತಾಯೀss, ಹೊತ್ತು ಮುಳುಗಿತು. ನಾ ಒಂದು ಕೊಡ ನೀರು ಜಗ್ಗಿಕೊಂಡು ಬರತೇನಿ. (ಹೋಗುವಳು) (ರಂಗೂ ಕಡ್ಡಿಕೊರೆದು ಹಚ್ಚುವಳು. ಅಷ್ಟರಲ್ಲಿ ರಾಮಣ್ಣ ಬರುವ.)

**ರಾಮಣ್ಣ :** ರಂಗೂ, ಆಕೆ ಎಲ್ಲಿ ಇದ್ದಾಳೆ ?

**ರಂಗೂ :** ಹಿತ್ತಲದೊಳಗ ನೀರು ಜಗ್ಗಿಕೊಂಡು ಬರಲಿಕ್ಕೆ ಹೋಗ್ಯಾಳೆ (ನೀರು ಜಗ್ಗುವ ಸಪ್ಪಳು)

**ರಾಮಣ್ಣ :** ತುಸು ದೀಪಾ ತಗೊಂಡು ಬಾss ಮ್ಮ, ಇಲ್ಲಿ. (ರಂಗೂ ದೀಪತರುವಳು) ರಾಮಣ್ಣ ಕಪಾಟಿನೊಳಗಿನ ಸೆರೆಬಾಟ್ಲಿಯನ್ನು ಹೊರಗೆ ತೆಗೆದು ಪಾತ್ರೆಯಲ್ಲಿ ಸುರಿದು ಗಟಗಟ ಕುಡಿಯುತ್ತಿರುವಷ್ಟರಲ್ಲಿ ಮಾಲತಿ ಬಂದು ಅಯ್ಯೋ ದೇವರೇ'— ಎನ್ನುತ್ತ ಕೊಡವನ್ನು ಕುಕ್ಕರಿಸುವಳು, ಬಾಟ್ಲಿಯನ್ನು ಕಸಿದುಕೊಳ್ಳುತ್ತಾಳೆ.) ಹಾಂ ಕೊಡಾ ಒಡೆದೀ; ಯಾಕ ಹಾಂಗ ದೊಪ್ಪನೆ ಇಡತಿ?

**ಮಾಲತಿ :** ಕೊಡ್ರಿ, ಇಲ್ಲಿ ಆ ಸೆರೇದ ಬಾಟ್ಲಿ. ಅದನ್ನ ಯಾಕ ತಕ್ಕೊಂಡಿರಿ ಕೈಯೊಳಗ? ನಾ ಬರೋದರೊಳಗss ಬರೇದು ಮಾಡಿ ಬಿಡಬೇ ಕಂತಾ ಮಾಡಿದ್ದಿರೇನು?

**ರಾಮಣ್ಣ :** ಯಾಕೆss, ನಿನಗೂ ಬೇಕಾಗಿತ್ತೇನು?

**ಮಾಲತಿ :** ಎಲವು ಇಲ್ಲದ ನಾಲಗೆ ಅಂತ ಬಾಯಿಗೆ ಬಂಧಾಂಗೇ ಮಾತಾಡತೀರಲ್ಲ! ನೀವೊಬ್ಬರು ಕುಡಿದು ಸುರಕೊಳ್ಳೋದೇ ಸಾಕು! ಈ ಹೊತ್ತು ಶೀಲಭದ್ರ ಬಂದಾನೆ!

**ರಾಮಣ್ಣ** (ಬೇಸರದಿಂದ) ಶೀಲಭದ್ರ! ಶೀಲಭದ್ರ ಯಾಕ ಬಂದನಂತ ಈ ಜೋಭದ್ರನ ಮನೀಗೆ. ಇನ್ನು ಸೆಟ್ಟಿ ಅಂಗಡಿಗೆ ಹೋಗಿ ಏನಾದರೂ ತರಬೇಕಾಯ್ತು.

**ಮಾಲತಿ :** ಅವನೇನು ನಿಮ್ಮ ಮನೀಗೆ ಕೂಳು ಕಾಣದೆ ಬಂದಿಲ್ಲ. ನೆಟ್ಟಿ ಅಂಗಡೀಗೆ ಹೋಗತಾರಂತ, ನೆಟ್ಟೀ ಅಂಗಡೀಗೆ! ಅದೇ ನೆಟ್ಟಿ ಈಗ ಬಂದಿದ್ದಽಽ; ನಿಮಗ ಕುಡಕ ವಡಕ ಅಂತಾ ಸಿಕ್ಕಸಿಕ್ಕಂತೆ ಆಡಿದ್ದಲ್ಲದೆ ನನಗೂ ಏನೇನೋ...(ಅಳುವಳು)

**ರಾಮಣ್ಣ :** ಅಳತೀ ಯಾಕ ? ಕೊಟ್ಟವರ ಗಂಟು ಮುಟ್ಟಿಸಲಿಲ್ಲ ಅಂದರೆ ನಾಲ್ಕು ಎಟ್ಟಿ ಮಾತು ಆಡೋರೇ!

**ಮಾಲತಿ :** (ಅಳುತ್ತ) ಅಂತೂ ನಾಳೆ ನನ್ನ ಮೇಲೆ ಯಾರೇ ಕೈ ಮಾಡಿದರೂ ಕೇಳೋಹಾಂಗಿಲ್ಲ ಅನ್ರಿ, ನೀವುಽಽ...! ನೀವು ಕುಡಿಯೋದು ಬಿಡಲಿಲ್ಲ ಅಂದರ ನನ್ನ ಮಾನ ಕಾಸಿಗೆ ಪಂಥೇರು ಆಗದೆ ಉಳಿಯೋದಿಲ್ಲ.

**ರಾಮಣ್ಣ :** ಹೂಽಽ! (ಎಂದು ನಿಟ್ಟುಸಿರಿಡುವನು)

**ಮಾಲತಿ :** (ಅಳುತ್ತ) ಮಗ ಜ್ವರದಿಂದ ಮಲಗಿ ಎಂಟು ದಿವಸ ಆಯಿತು! ಇದ್ದಾನೋ ಸತ್ತಾನೋ ಅಂತಾ ಕಣ್ಣೆತ್ತಿ ನೋಡವಲ್ಲಿರಿ! ನಿಮ್ಮ ಕುಡಿತ ಆಯಿತು, ನೀವಾಯ್ತು! ಈವೊತ್ತಂತೂ ಹಣ್ಣು, ಹಾಲು, ಕಾಫಿ, ಪೇಪರಮಿಂಟ ಏನೇನೋ ಬೇಡತಾನ ಚಿಮ್ಮಣ್ಣ. ಕೇಳಿದರೆಽ ಹಡೆದ ಹೊಟ್ಟೆಗೆ ಕೊಳ್ಳೀ ಕೊಟ್ಟಹಾಂಗ ಆಗತದ! ಆದರೂ ನಿಮ್ಮ ಕುಡತಾ ಬಿಡೋದಿಲ್ಲ! ಮಗನಿಗೇನೂ ತಂದು ಕೊಡೋ ಹಾಂಗಿಲ್ಲ!

**ರಾಮಣ್ಣ :** ಹೂಂಽಽಂ! (ಎಂದು ಮತ್ತೆ ನಿಟ್ಟುಸಿರು)

**ಮಾಲತಿ :** ನಾನೇ ಏನಾದರೂ ತರಬೇಕು ಅಂದರೆ ಕೈಯೊಳಗೆ ಕಾಸಿಲ್ಲ. ಯಾರಲ್ಲಾದರೂ ಕೈಗಡ ಬೇಡಬೇಕೆಂದರೆ ಕುಡುಕರು ಅಂತಾ ಯಾರೂ ಕೈಗಡಾ ಕೋಡೋದಿಲ್ಲ. ಕೇಳ್ಳಿಕ್ಕೆ ಹೊರಗೆ ಹೋದೇನೆಂದರೆ ಹರಕು ಸೀರೆ ಹೊರ್ತು ಬೇರೆ ಸೀರೆ ಇಲ್ಲ! (ಅಳು ದನಿಯಲ್ಲಿ) ದೇವರು ಇಂಥ ಸ್ಥಿತಿ ತರೋದಕಿಂತ ಗಡಾನೇ ನನ್ನ ಕಣ್ಣು ಮುಚ್ಚಿಬಿಟ್ಟರೆ.

(ಒಳಗಿಂದ-ಅವ್ವ ನೀರು ಎಂದು ಚಿದಂಬರನ ದನಿ)

ಮಾಲತಿ : ಬಂದೆ ನನ್ನಪ್ಪಾss ! ಸೆರೆಬಾಟ್ಲಿ ಕಪಾಟಿನೊಳಗೇ ಇಟ್ಟಿರತೇನಿ. ತಗೊಂಡೀರಿ ಮತ್ತೆss (ಹೋಗುವಳು)

ರಾಮಣ್ಣ : ಇಲ್ಲಿಲ್ಲ. (ಅವನು ಹೊರಗಡೆ ನೋಡುತ್ತ) ಮಗು ಮೃತ್ಯುವಿನ ದವಡೆಯಲ್ಲಿ ! ಹೆಂಡತಿ ಸಾವಿನ ಸಮೀಪದಲ್ಲಿ ! ಆದರೂ ಈ ನೆರೆಗುಡುಕನಿಗೆ ಪಶ್ಚಾತ್ತಾಪವಿಲ್ಲ! ಮದ್ಯದ ಮತ್ತಿನಿಂದ ತಲೆ ತೂಗಾಡುತ್ತದೆ; ಮಿದುಳಿಗೆ ಮಂಕು ಹಿಡಿಯುತ್ತದೆ. (ತೊದಲುತ್ತ) ಅವ್ವಾ ನೀರು ! ಮಗುವಿನ ಕರುಣದ ಕೂಗು ! ಮುಖ ನೋಡಲು ಹೋಗಬೇಕೆಂದರೆ ಸೆರೆ ನಿಶೆಯಲ್ಲಿ ಕಾಲುಗಳು ತತ್ತರಿಸುತ್ತವೆ ! ಹಣ್ಣು, ಹಾಲು, ಕಾಫಿss ಪೇಪರ ಮಿಂಟss! ನೆರೆಗುಡಕನ ಮಕ್ಕಳಿಗೆ ಮಣ್ಣಿನ ಹೊರತು ಮತ್ತೊಂದು ಗತಿಯಿಲ್ಲ ! (ಟಾಂಗೆಯ ಸಪ್ಪಳು) ಈ ನರಕದ ಕ್ಷುದ್ರಕೀಟಕದ ಸಮಾಚಾರವನ್ನು ತೆಗೆದುಕೊಳ್ಳಲು ಮತ್ತಾವ ಮಹಾಪುರುಷ ಬಂದ ! (ಡಾಕ್ಟರರು ಇಳಿದುಬರುವರು.)

ಡಾಕ್ಟರ : ರಾಮರಾಯರು ನೀವೇ ಅಲ್ಲವೇ ? ನಿಮ್ಮ ಮಗುವಿಗೆ ಜ್ವರಬಂದಿದೆಯೇ ? ಕರಕೊಂಡು ಬರ್ರಿ. ನೋಡೋಣ.

ರಾಮಣ್ಣ : ರಂಗೂ,ಕರಕೊಂಡು ಬಾ ಅಂತ ಹೇಳವ್ವ ಚಿಮ್ಮಣ್ಣನ್ನ. (ಮಾಲತಿ ಮಗುವನ್ನೆತ್ತಿಕೊಂಡು ಬರುವಳು).

ಡಾಕ್ಟರ : ಎಷ್ಟು ಸೊರಗಿದೆಯಲ್ಲ ಮಗು! ಆ ಮೇಜಿನ ಮೇಲೆ ಮಲಗಿಸು ತಾಯಿ! (ಎದೆ ಮೊದಲಾದುದನ್ನು ಬಾರಿಸಿ ನೋಡುವ, ಜ್ವರ ಅಳೆಯುವನು) ಹೀಗಿದ್ದೂ ಇಷ್ಟು ದೂರ ಬೇನೆಯನ್ನು ಬಲಿಯಗೊಟ್ಟಿದ್ದೀರಲ್ಲ ! ಎಳೆ ಮಗು ಎಷ್ಟು ಸಂಕಟ ಪಟ್ಟಿತೋ! ಜ್ವರ ಆರಿ ಆರಿ ಬರುತ್ತದೆಯಲ್ಲವೆ ?

ರಾಮಣ್ಣ : ಇರಬೇಕು.

ಡಾಕ್ಟರ : ಮಗುವನ್ನು ನೋಡಿಯೇ ಇಲ್ಲವೇನು ನೀವು?

ಮಾಲತಿ : ಜ್ವರ ಆರಿ ಆರಿ ಬರುತವೆ. ಆದರೆ ಎರಡು ದಿನದಿಂದ ಕಡಿಮೆ ಆಗಿಲ್ಲ.

ಡಾಕ್ಟರ : ಮಲೇರಿಯಾ ಜ್ವರ. ಬೆದರುವ ಕಾರಣವಿಲ್ಲ. ಈ ಎರಡು ಚೀಟುಗಳನ್ನು ಮೂರು ಮೂರು ತಾಸು ಅಂತರದಿಂದ ಕುಡಿಸಿರಿ. ನಾಳೆ ಬೆಳಗಿಗೆ ಜ್ವರ ಇಳಿದಿದ್ದರೆ ಇಂಜಕ್ಷನ್ ಕೊಡತೇನಿ!

ರಾಮಣ : ನಿಮ್ಮ ಫೀ ಎಷ್ಟು ?

ಡಾಕ್ಟರ ಅದನ್ನು ಶೀಲಭದ್ರರಾಯರು ಕೊಡುತಾರೆ. ಅವರೇ ಇಲ್ಲಿಗೆ ಕಳಿಸಿಕೊಟ್ಟರು. ( ರಾಮಣ್ಣ ಸೆರೆಗುಡುಕರಂತೆ ಕೆಮ್ಮುತ್ತಾನೆ. ) ರಾಯರೇ ನಿಮಗೂ ಸ್ವಸ್ಥವಿಲ್ಲವೇ? ನಿಮ್ಮ ಉಸುರಿನಲ್ಲಿ ಇದೇನಿದು ದುರ್ಗಂಧ! ( ಡಾಕ್ಟರ ಮೂಗು ಏರಿಸಿದಂತೆ ಮಾಡುವನು. ) ನನ್ನಲ್ಲಿ ಯಾವದೂ ಮುಚ್ಚಿಡಬೇಡಿರಿ. ನಿಮ್ಮ ಶೀಲಭದ್ರರಾಯರೂ ನಾನೂ ಅಣ್ಣ-ತಮ್ಮ ಇದ್ದಂತೆ! ಯಾಕೆ ಏನಾಗಿವೆ ನಿಮಗೆ? ಈ ನೆರೆಗುಡುಕತನವನ್ನು ಯಾವಾಗ ಕಲಿತಿರಿ? ನೀವು ಸುಶಿಕ್ಷಿತರು, ಸರಕಾರಿ ನೌಕರರು! ನಿಮ್ಮ ಸ್ವಂತದ ಯೋಗ್ಯತೆಯು ಅರಿವಿಲ್ಲ, ಸ್ಥಾನ-ಮಾನದ ಪರವೆ ಇಲ್ಲ. ಮಾನಾಪಮಾನಗಳ ಎಚ್ಚರವಿಲ್ಲ. ಹೆಂಡಿರು-ಮಕ್ಕಳ ಲಕ್ಷವಿಲ್ಲ. ಸೆರೆ ಗುಡುಕತನಕ್ಕೆ ಬಿದ್ದು ಎಲ್ಲಾ ಹಾಳುಮಾಡಿಕೊಂಡಿರಿ ಈ ಕೆಟ್ಟ ಚಟದಿಂದ ನರಗಳೆಲ್ಲ ನಿಶ್ಶಕ್ತವಾಗಿ ಬುದ್ಧಿಭ್ರಂಶವೂ ಆಗುವದು, ಕಡೆಗೆ ಹುಚ್ಚು ಹಿಡಿದರೂ ಹಿಡಿಯಬಹುದು. ಯಾಕೆ ಗಂಟುಬಿದ್ದಿತು ಈ ಚಟ ನಿಮಗೆ! ಇದರಿಂದಲೇ ಕೈಯಲ್ಲಿ ಕಾಸಿಲ್ಲವಾಯಿತು; ಮಗ ಮೃತ್ಯುವಿನ ದವಡೆಯಲ್ಲಿದ್ದರೂ ನಿಮ್ಮ ಚಟ ಮಾತ್ರ ಬಿಡಲಿಲ್ಲ!

ರಾಮಣ್ಣ : ನನ್ನ ದುರ್ದೈವ ( ನಿಟ್ಟಿಸಿರು )

ಡಾಕ್ಟರ : ಎಲ್ಲಿ ದೈವ ತರತೀರಿ? ಜಾತಿ, ನೀತಿ, ಸ್ಥಾನಮಾನ ಎಲ್ಲಾ ಮರೆತು ಕುಡಿಯೋ ಚಟಕ್ಕೆ ಬಿದ್ದೀರಿ! ಪಶುಗಳಿಗೆ ಕೂಡ ತಮ್ಮ ಮಕ್ಕಳು ಮರಿ ಅಂತ ಅರಿವು ಇರುತದೆ; ನೀವು ಅದಕ್ಕಿಂತ ಕಡೆ ಆಗಿದ್ದೀರಿ. ಮಗನಿಗೆ ಜ್ವರ ಬಂದು ಏನಾಗೇದ ಅನ್ನೋದು ಕೂಡ ನಿಮಗೆ ಗೊತ್ತಿಲ್ಲ ಹೀಗೆ ಮನುಷ್ಯತ್ವ ಮಣ್ಣುಗೂಡಿಸಲಿಕ್ಕೆ ದೈವ ಹೇಳಿಕೊಟ್ಟಿತೇನು? ಈ ಚಟ ಬಿಡಲಿಲ್ಲ ಅಂದರೆ ಬೀದಿಯೊಳಗಿನ ನಾಯಿಗಿಂತ ಕಡೀ ಆಗತೀರಿ; ಅರಿವು ಇಟ್ಟುಕೊಳ್ಳಿರಿ ಈ ಮಾತು.

**ರಾಮಣ್ಣ** : ಬೀದಿಯೊಳಗಿನ ನಾಯಿss ಸೆರೆಗುಡುಕss! (ಪಠಾಣ ಬರುವ) ಅಯ್ಯೋ ಇವನಾರು? ಯಮನಾಳು...ಪಠಾಣ!

**ಪಠಾಣ** : ಅರೀ ರಾಮಣ್ಣಾ, ಹಮಾರೀ ಲಾಲಾ ಬುಲಾತೇ ಹೈಂ! ಅಭಿಕೇ ಅಬ್ಬೀ ನಿಕಲನಾ!

**ಡಾಕ್ಟರ** : ಯಾಕೋ ಕರೀಮಖಾನ, ನಿಮ್ಮ ಲಾಲಾ ಯಾಕೆ ಕರೀತಾರೆ ಇವರನ್ನು?

**ಪಠಾಣ** : ದೋ ಮೈನೆ ಆತು ದಾಗದಾರಸಾಬ; ಬಡ್ಡೀ ಭೀ ನೈ ಅಸ್ಸಲಭೀ ನೈ! ಈ ಶರಾಬೀಕೆ ದಸಿಂದಾ ಲಾಲಾ ಬಹೋತಹೀ ಗುಸ್ಸೇಮೆ ಆಗಯೇಹೈಂ!

**ಡಾಕ್ಟರ** : ನಿಮ್ಮಲ್ಲಿಯೂ ಸಾಲಾ ಮಾಡಿದ್ದಾರೆಯೇ?

**ಪಠಾಣ** : ಶರಾಬೀ ಬೊಲೇತೋ, ಕಹಾಂಭೀ ಹೋ, ಉಸಕೋ ಪೈಸೆ ಮಿಲೆತೋ ಬಸ್ ! ಆಗೇ ಕ್ಯಾ ಹೋಗಾ, ಕ್ಯಾ ನಹೀ ಹೋಗಾ ಉನಕಾ ಅಂದಾಜಭೀ ನೈ, ಕಹಾಂಕಾ ಸಾಲಾ ದಾರೂ ಬಾಜೀಕೋ. ಅರೀ ಚಲ್ ರಾಮಣ್ಣಾ ( ಎಂದು ಹಂಟರ ಬಾರಿಸುವನು )

**ರಾಮಣ್ಣ** : (ಎದ್ದು ತತ್ತರಿಸುತ್ತ) ಬ್ಯಾಡ, ಬ್ಯಾಡ, ಪಠಾಣಸಾಬ, ಆ ಯಮಧರ್ಮನ ಹತ್ತರ ನನ್ನ ಎಳೆದೊಯ್ಯಬ್ಯಾಡ. ನಿನ್ನ ಕಾಲಬೀಳತೇನಿ. ( ಎಂದು ತತ್ತರಿಸಿ ಅರ್ಧದಲ್ಲಿಯೇ ಧೊಪ್ಪನೆ ಬೀಳುವನು. )

**ಪಠಾಣ** : ಹಟ ಪೀಛೇ, ದಾರೂಬಾಜ ಕಹಾಂಕಾ! ನಹೀ ಆಯೇತೋ ಹಡ್ಡೀ ತೋಡ ಡಾಲೂಂಗಾ! ( ಮತ್ತೆ ಹಂಟರ ಚಟಾಯಿಸುವನು )

**ರಾಮಣ್ಣ** : ಅಯ್ಯೋ ಸತ್ತೆ ಸತ್ತೆ! ಡಾಕ್ಟರ ಸಾಬ......

**ಪಠಾಣ** : ಅರೀ ಇನಕೋ ಕೆಂವ್ ಪುಕಾರ ರಹಾ ಹೈ? ದಾರೂ ಪೀನೇಕೆ ವಖತಮೇ ಕಿಸ್ಕೋಭೀ ನಹೀ ಪೂಛಾ! ಅಬ್ ಮುಶಕಿಲ್ ಆಗಯೀ ಕರಕೇ ದೂಸರೇಂಕೊ ಪುಕಾರರಹಾ ಹೈ. ಚಲ್ ಜಲದೀ ಜಲದೀ! ನಹೀತೋ ದೇಖ ಹಂಟರ! (ಹಂಟರ ಸಪ್ಪಳ)

**ಮಾಲತಿ :** ಹೊಡೆಯ ಬೇಡ ತಂದೇ! ಮೊದಲೇ ಬಡಕಲ ಬೆದರು ದೇಹ! ಒಂದೇ ಹೊಡೆತಕ್ಕೆ ನನ್ನ ಮುತ್ತೈದೆತನ ಮಣ್ಣುಗೂಡೀತು!

**ಪಠಾಣ :** ಅರೇ ಮಾಯೀ ಆಪ್ ಕೆಂವ್ ಭೀಚಮೇ ಅತೀ ಹೈ? ನಮದೂ ಲಾಲಾಕೆ ಪಾಸ ನೀವು ಬರಬೇಕಾದೀತ್.

**ಮಾಲತಿ :** ಅಪ್ಪಾ, ನಾನೇ ಬಂದು ನಿಮ್ಮ ಪಠಾಣ ಸಾಬರ ಕೈ ಕಾಲು ಬಿದ್ದು......

**ಪಠಾಣ :** ನೀವು ಆಯೀತೋ ಕೈಕಾಲು ಬೀಳನೇಕೀ ಕುಛ ಜರೂರತ ನಹೀಂ! ಸಬ ಸಬ ಬೇಬಾಕ ಹೋ ಜಾಯಗಾ, ಉಪರ ಪೈಸೆಭೀ ಮಿಲೇಂಗೆ. ಚಲೋ ಫಿರ್......

**ರಾಮಣ್ಣ :** ಬೇಡ ಬೇಡ ಪಠಾಣ ಸಾಬ, ಹೆಂಡತೀನ್ನ ಕರಕೊಂಡು ಹೋಗಬೇಡ. ಪಠಾಣನ ಹತ್ತಿರ ಹೋದ ಮೇಲೆ ನನ್ನ ಹೆಂಡತಿ...ನನ್ನ ಮಾಲತಿ......! ಇನ್ನೆಲ್ಲಿಯ ಮಾ...ಲ...ತೀ! ಹಾಯ್ ಹಾಯ್ (ಎಂದು ಧೊಪ್ಪನೆ ಬೀಳುವನು).

**ಪಠಾಣ :** ಅರೆ ನಿನಗ್ ಯಾತಕ್ ಬೇಕ್ ಹೆಂಡತಿ! ಹೆಂಡ ಇದ್ದರೆ ಸಾಕ್! ನಿಂದೂ ಹೆಂಡಾ ನಿನಗ್ ಇರಲಿ, ನಿನ್ನ ಹೆಂಡತಿ ನಮ್ಮ ಲಾಲಾಗ್ ಇರಲಿ! ಚಲೋ ಮಾಯೀ! (ಮಾಲತಿ ಅಳುತ್ತ ನಿಲ್ಲುವಳು)

**ರಾಮಣ್ಣ :** ಬ್ಯಾಡ ಬ್ಯಾಡ ಪಠಾಣಸಾಬ, ಈ ಬಂಡತನದ ಬಾಳ್ವೆ ಈ ಕಣ್ಣಿನಿಂದ ನೋಡಲಾರೆ! (ಬಾಗಿ ಕುಳಿತು) ಪಠಾಣಸಾಬ, ನಿನ್ನ ಬೂಟು ಗಾಲಿನಿಂದ ನನ್ನ ತಲೆಯನ್ನು ತುಳಿದು ಒಡೆದುಬಿಡು! ಬದುಕಬಾರದು ನಮ್ಮಂಥ ಕುಡುಕರು ಈ ಭೂಮಿಯಮೇಲೆ! ಹುಂ! ತಡಮಾಡಬೇಡ; ತುಳಿದುಬಿಡು! ಸೆರೆಗುಡಕ ಸತ್ತುಹೋಗಲಿ! ಈ ಸೆರೇದ ಚಟದೊಳಗ ಜಾತಿಹೋಯ್ತು, ನೀತಿಹೋಯ್ತು, ಆಸ್ತಿಹೋಯ್ತು, ಇದ್ದದ್ದು ಬಿದ್ದದ್ದು ಎಲ್ಲ ಹೋಯ್ತು! ಈಗ ಹೆಂಡತೀನೂ ಹೋಗುತಾಳೆ, ಮಗನೂ ಮಣ್ಣು ಗೂಡುತಾನೆ! ನೋಡಲಾರೆ! ನೋಡಲಾರೆ (ಎದ್ದು ಹುಚ್ಚನಂತೆ) ಎಲ್ಲಿದೆ ನನ್ನ ಆಯುಷ್ಯದ ಅಮೃತ, ಎಲ್ಲಿದೆ ನನ್ನ ಸಂಸಾರದ ಸುಧಾ! ತರತೇನಿ, ತರತೇನಿ— (ಎಂದು ಹುಚ್ಚನಂತೆ ಕಪಾಟುತೆಗೆದು ಸೆರೆ ಬಾಟಲಿ ತರುವ).

ಇದೇ, ಇದೇ ನನ್ನ ಬಾಳುವೆಯ ಭಾಂಡಾರ! ಇದೇ ನನ್ನ ಪ್ರಪಂಚದ ಪರಮೇಶ್ವರಿ! ದೇವೀ ಒಮ್ಮೆ ಹೊಟ್ಟೆಯೊಳಗೆ ಹೋಗು! ಮುಚ್ಚಿದ ಕಣ್ಣು ತೆರೆಯುವದರೊಳಗೇ ನಾನು ಪರಲೋಕದಲ್ಲಿರಬೇಕು. ಕಟುಕ ಅರಿವು ತಪ್ಪಿಸಿ ದನಗಳ ಕೊರಳು ಕೊಯ್ಯುವಂತೆ, ಈ ನಿಶೆಯಲ್ಲಿ ನಾನಿರು ವಾಗಲೆ, ಪಠಾಣಸಾಬ, ನನ್ನ ತಲೆಯನ್ನು ತುಳಿದು ಚೂರು ಚೂರು ಮಾಡಿ ಬಿಡು! (ಮತ್ತೆ ಪಠಾಣನ ಹತ್ತಿರ ಸಮೀಪ ಕುಳಿತುಕೊಳ್ಳುವ)

**ಮಾಲತಿ :** ( ಅಳುತ್ತ ) ಅಯ್ಯೋ! ಏನಾಯಿತು ನಿಮಗ! ನನ್ನ ಕುಂಕುಮ, ನನ್ನ ಮುತ್ತೈದೆತನ...... ಈ ಬಾಟ್ಲಿ...!

**ಪಠಾಣ :** ಹಟೋ ಮಾಯೀ, ಪೀಛೇ! ಮೈ ಹೂಂ ಇಸ್ ಶರಾಬೀಕೇ ಸೈತಾನಕೋ ಬಿಡಿಸನೇಕೋ! ಅರೇ ಏ, ಶರಾಬೀ (ಹಂಟರ ಘಡಾಯಿಸುತ್ತ) ಲಾವ ವಹ ಬಾಟಲೀಕೋ (ಕೈಹಾಕುವನು)

**ರಾಮಣ್ಣ :** ಇಲ್ಲ, ಇಲ್ಲ, ಕೊಡೋದಿಲ್ಲ! ಇದೇ ಕೊನೆಯ ಗುಟುಕು! ಸತ್ತುಹೋಗತೇನಿ! ನರಕದ ಹುಳಾ ಆಗಿ ನಾವಿರ ವರ್ಷ ಒದ್ದಾಡತೇನಿ! ಮಾಲತೀ, ಅಳಬ್ಯಾಡ, ಮಕ್ಕಳೂ ಮರಿ ಜೋ...ಕೆ....!

**ಪಠಾಣ :** (ಹಂಟರದಿಂದ ಹೊಡೆದು) ಅಬೇ ಕ್ಯಾ ಬಕ್ ಬಕ್ ಕರರಹಾ ಹೈ? ದಾರೂ ಬಾಜೀ ಕೊ ಬಿಡತೀದಾನ್ ಯಾ ನಹೀಂ ?

**ರಾಮಣ್ಣ :** ಹೊಡೀಬ್ಯಾಡ ಸಾಹೇಬ! ಬಿಟ್ಟೆ, ಬಿಟ್ಟೆ; ಇನ್ನೆಂದೂ ಮುಟ್ಟೋದಿಲ್ಲ. ಹೆಂಡತಿ ಆಣೆ, ಮಕ್ಕಳ ಆಣೆ, ದೇವರ ಆಣೆ, ನಿಮ್ಮೆಲ್ಲರ ಆಣೆ! ಇನ್ನೆಂದೂ ಸೆರೆ ಕುಡಿಯೋದಿಲ್ಲ! ಆದರೆ ಪಠಾಣಸಾಬ, ಮಾಲತೀನ್ನ ಧರ್ಮಸೆರೆಬಿಡು! ನಿಮ್ಮೆದುರಿಗೇ ಈ ಬಾಟ್ಲಿ ಒಡೆದು ಬಿಡತೇನಿ. (ಒಡೆಯುತ್ತಾನೆ) ನಿಮ್ಮ ಸಾಲ, ನಿಮ್ಮ ಸಾಲ...... ಅಯ್ಯೋ ಸಾಲ...!

**ಪಠಾಣ :** ಏದಿ ಒಡಕೊ ಬ್ಯಾಡ. ನಮ್ಮ ಲಾಲಾ ಭೀ ಆದಮೀ ಅದಾನ್! ನಿಮ್ಮಂಥ ದಿವಾನ ಆದಮೀ ಕೈಯ್ಯಾಗ ಸಿಗತೀದಾವ ಕರಕೇ

ಭಲ ಭಲತೇ ಬಡ್ಡೀ ವಸೂಲ್ ಮಾಡತೀದಾವ್! ನೀ ದಾರೂ ಬಿಡತೀ ದಾನ್, ಆಮೇಲೆ ತೋ, ಮೈ ಸಬ್ ಸಬ್ ಬೇಬಾಕ ಕರಾವುಂಗಾ! ಬೋಲ್.

**ರಾಮಣ್ಣ :** ಬಿಟ್ಟೆ, ಬಿಟ್ಟೆ! ಇನ್ನೆಂದೂ ನೆರೆ ಕುಡಿಯೋದಿಲ್ಲ, ಪಠಾಣ ಸಾಬ. ನೀನು ಯಮಧರ್ಮನ ಆಳಲ್ಲ; ನನ್ನ ಉದ್ಧಾರಕ್ಕಾಗಿ ವೇಷಾಂತರ ಮಾಡಿಕೊಂಡು ಬಂದಿರುವ ನನ್ನ ಕುಲದೇವರು! ಈ ದೇವರ ಪಾದಗಳನ್ನು ಹಿಡಿದು ಹೇಳತೇನಿ...(ಪಾದಗಳನ್ನು ಹಿಡಿಯಹೋಗುತ್ತಾನೆ)

**ಪಠಾಣ :** ಮೇರೇ ಪಂವಕೋ ಕೆಂವ್ ಛೂತಾ ಹೈ? ಉಠೋ ಉಠೋ!

**ಡಾಕ್ಟರ :** ಪಠಾಣಸಾಬ, ಇನ್ನೂ ಮುಗಿಲಿಲ್ಲೇನು ನಿಮ್ಮ ನಾಟಕ?

**ಪಠಾಣ :** ಮುಗೀತಲ್ಲ, ಈ ಗಡ್ಡ ಮೀಸಿ ತೆಗೆದಕೂಡಲೆ......! ( ತೆಗೆಯುವನು )

**ರಾಮಣ್ಣ :** ( ಅಚ್ಚರಿಯಿಂದ ) ಯಾರು, ಶೀಲಭದ್ರ! ಪಠಾಣ ಅಲ್ಲ; ಪ್ರ: ಪರಮೇಶ್ವರ! ನನ್ನ ಪರಮೇಶ್ವರನ ಸಾಕ್ಷಿಯಾಗಿ ಮತ್ತೊಮ್ಮೆ ಪ್ರತಿಜ್ಞೆ ಮಾಡುತ್ತೇನೆ. ( ಶೀಲಭದ್ರನ ಪಾದಗಳನ್ನು ಹಿಡಿಯಹೋಗುತ್ತಾನೆ )

**ಶೀಲಭದ್ರ :** ಹಿಂದೆ ಸರಿದು ರಾಮಣ್ಣನನ್ನು ಎತ್ತಿ ನನ್ನ ಕಾಲು ಗಳನ್ನೇಕೆ ಹಿಡಿಯುವಿ ಭಾವಾ: ಪಶ್ಚಾತ್ತಾಪದಿಂದ ಪುನೀತನಾಗಿರುವಿ! ಇನ್ನುಮೇಲಾದರೂ ಈ ಕೆಟ್ಟ ಚಟವನ್ನು ಬಿಡು! ಮುತ್ತಿನಂಥ ಮಕ್ಕಳು, ಮಹಾದೇವಿಯಂಥ ಮಡದಿ, ಬಂಗಾರದಂಥ ಬಾಳುವೆ ಸಹಿತವಾಗಿ ಈ ನವೀನ ನಂದಗೋಕುಲ ನರಕದ ನಿವಾಸವಾಗಿತ್ತು, ಅಲ್ಲವೇ, ಈ ಸೆರಿಗುಟುಕ ಚಟದಿಂದ! ನಿನ್ನ ಸಾಲವನ್ನೆಲ್ಲ ನಾನು ತೀರಿಸುವೆ. ಎದೆ ಯೊಡೆಯಬೇಡ ಮಾಲೂ, ಈಗ ನಿನ್ನ ಪತಿಗೆ ಪಶ್ಚಾತ್ತಾಪದಿಂದ

ಪುನರ್ಜನ್ಮ ಬಂದಿದೆ. ಸತೀ ಸಾವಿತ್ರಿಯಂತೆ ಸತ್ತ ಗಂಡನನ್ನು ಮತ್ತೆ ಬದುಕಿಸಿರುವಿ. ಇನ್ನು ಅದರ ಆನಂದ ಸಾಗರದಲ್ಲಿ ಸಂಸಾರ ನೌಕೆಯನ್ನು ನಾಗಿಸಿರಿ!

ಎಲ್ಲರೂ : ದಾರೂಬಂದ — ಜಿಂದಾಬಾದ —

ದಾರೂ ಪೀನಾ ಮತಕರೋ। ಯಾರೋ ಅಕ್ಕಲಗುಂಗ
ಹೊತೀಹೈ ॥ಪಲ್ಲ॥

ಅಪನೇ ಪದರಕಾ ದಾಮ ಜಾಕರ। ಮುಖಮೇ ಮಿಟಿಯಾ
ಪಡತೀ ಹೈ ॥ ೧ ॥

ಕಹತ ಕಬೀರ ಸುನೋಭಾಯಿ ಸಾಧೋ। ದಾರೂ
ಛೋಡಕರ ರಾಮ ಬನಾವೋ ॥ ೨ ॥

ತೆರೆ

(ಪುನರ್ಜನ್ಮ ಪೂರ್ಣವಾದುದು)

# ರಣದೇವತೆಯ ರಂಗಪಂಚಮಿ

## ಅಥವಾ

# ಕರ್ಣ-ರಸಾಯನ

(ರೇಡಿಯೋ ರೂಪಕ)

ಪಾತ್ರಗಳು :

| | | | |
|---|---|---|---|
| (೧) | ಕರ್ಣ | (೫) | ಶ್ರೀಕೃಷ್ಣ |
| (೨) | ಸೂರ್ಯ (ಧ್ವನಿರೂಪದಲ್ಲಿ) | (೬) | ಧರ್ಮರಾಜ |
| (೩) | ದುರ್ಯೋಧನ | (೭) | ಅರ್ಜುನ |
| (೪) | ಶಲ್ಯರಾಜ | (೮) | ಭೀಮ (ಧ್ವನಿ ಮಾತ್ರ) |

(೯) ಕುಂತೀದೇವಿ

**ನಿವೇದಕ :** ಕುರುಕ್ಷೇತ್ರದ ಕಾಳೆಗ ಆರಂಭವಾಗಿ ಹದಿನಾರು ದಿನಗಳಾಗಿವೆ. ಅಂದು ಭಾನುವಾರ. ಎಂದಿನಂತೆ ಮಾಧ್ಯಂದಿನ ಸಂಧ್ಯಾವಂದನೆ ಮಾಡುತ್ತಿದ್ದಾನೆ ಕೆಚ್ಚೆದೆಯ ಕರ್ಣ.

**ಕರ್ಣ :** (ಸೂರ್ಯದೇವನನ್ನು ನಮಿಸುತ್ತ) ಓಂ ಭಾಸ್ಕರಾಯನಮಃ ಓಂ ಜಗಚ್ಚಕ್ಷುಷೇನಮಃ, ಓಂ ವಿಶ್ವಪಿತ್ರೇನಮಃ ಓಂ ಮಮ ಪಿತೃದೇವಾಯನಮಃ......

ಭಗವನ್. ಭಾನುದೇವಾ, ಇದೇ ನಿನಗೆ ಅಂತಿಮ ಅರ್ಘ್ಯವಾದರೂ ಆಗಬಹುದು. ಸೇವೆಯನ್ನು ಸ್ವೀಕರಿಸಿ ಸಂತುಷ್ಟನಾಗು ತಂದೇ. ಬಂಧುದ್ವೇಷದ ಭಾತರ ಯುದ್ಧದ ಹುಯಿಲುಗಾಳಿ ಹಿಡಿದಿದೆ. ಕಾರಸ್ಥಾನಿಯಾದ ಕೃಷ್ಣ ಪಾಂಡವ ಪಕ್ಷಕ್ಕೆ; ಕೆಚ್ಚೆದೆಯ ಕರ್ಣ ಕೌರವರ ಕಡೆಗೆ. ಕೃಷ್ಣಾ

ಕೃಷ್ಣಾ, ನಾನು ಎಂತಹ ಉನ್ಮತ್ತ ಆವೇಶದಲ್ಲಿರುವಾಗ ನನ್ನ ಜನ್ಮವೃತ್ತಾಂತ ವನ್ನು ತಿಳಿಸಿ ನನ್ನನ್ನು ಜರ್ಜರ ಮಾಡಿದೆಯಲ್ಲ! ಕೌರವೇಶ್ವರನಿಗೆ ಇನ್ನೆಲ್ಲಿಯ ಸಾಮ್ರಾಜ್ಯ! ಕರ್ಣನಿಗಂತೂ ಕೊನೆಗಾಲ ಖಂಡಿತ! ರಾಜ್ಯಕ್ಕಾಗಿ ರಕ್ತಪಾತ, ರಣದೇವತೆಯ ರಂಗಪಂಚಮಿ ಅನಿವಾರ್ಯ......

ಸೂರ್ಯ : (ಧ್ವನಿ ಮಾತ್ರ) ಇಲ್ಲ, ಇಲ್ಲ, ನೀನು ಅದನ್ನು ನಿವಾರಿಸ ಬಲ್ಲೆ.

ಕರ್ಣ : ಯಾರಿಂತು ನುಡಿವವರು? ನಾನು ಸಾವನ್ನು ಸೋಲಿಸ ಬಲ್ಲೆನೇ?

ಸೂರ್ಯ : (ಧ್ವನಿ) ಸಂದೇಹವಿಲ್ಲ! ಸೂರ್ಯನ ನುಡಿ ಸುಳ್ಳಾಗಲಾರದು.

ಕರ್ಣ : ತಾತಾ, ತಾತಾ, ನಾನೀಗ ಮಾಡಬೇಕಾದುದೇನು?

ಸೂರ್ಯ : ( ಧ್ವನಿ ) ಅರ್ಜುನನ ಅಂತ್ಯಕಾಲವನ್ನು ತಪ್ಪಿಸಲು ಸುತ್ತಲೂ ಪ್ರಯತ್ನಗಳು ನಡೆದಿವೆ. ಕೃಷ್ಣನಂತೂ ಜನ್ಮವೃಂತಾಂತವನ್ನು ತಿಳಿಸಿ ನಿನ್ನೆದೆಗೆ ಗಾಯ ಮಾಡಿದ. ಇನ್ನು ಪುತ್ರನ ಪ್ರಾಣಭಿಕ್ಷೆಯನ್ನು ಬೇಡಲು ಕುಂತೀದೇವಿ ಬರುವಳು. ಅವಳ ಮೋಹದ ಮಾತುಗಳಿಗೆ ಮರುಳಾಗಬೇಡ; ಬೇಡಿದ ಭಿಕ್ಷೆಯನ್ನು ನೀಡಬೇಡ, ಕಂದಾ.

ಕರ್ಣ : ಪಿತೃದೇವಾ, ಸುಗಂಧ-ದುರ್ಗಂಧ, ಸುರೂಪ-ಕುರೂಪ, ಸುಜನ-ಕುಜನ ಸರ್ವರ ಮೇಲೆಯೂ ಸಮನಾಗಿಯೇ ಸುವರ್ಣ ಕರ ಗಳನ್ನು ಸುರಿಸುವ ಸಮತಾವಾದಿಯಾದ ಸೂರ್ಯನ ಸುತನಾದ ನಾನು, ಬೇಡಿದವರನ್ನು ಬರಿಗೈಯಿಂದ ಕಳಿಸುವದು ತಂದೆಯ ಕೀರ್ತಿಗೆ ಕಲಂಕ ವನ್ನು ಉಂಟುಮಾಡಿದಂತಾಗುವದಿಲ್ಲವೇ?

ಸೂರ್ಯ : (ಧ್ವನಿ) ಈ ಉದಾರ ಹೃದಯದ ದುರುಪಯೋಗ ವಾಗುತ್ತಿದೆ; ಮಗೂಽಽ.

ಕರ್ಣ : ಆದರೂ ತಪ್ಪಿಲ್ಲ. ವೀರನಾಗಿ ಕಾದಾಡಿ ರಣರಂಗದಲ್ಲಿ ದೇಹವನ್ನು ಬಿಟ್ಟರೆ ಸೂರ್ಯಮಂಡಲದಲ್ಲಿ ಶೋಭೆಗೊಳ್ಳುವೆನಲ್ಲವೇ? ಪಿತಾ ಪುತ್ರರ ಸತ್ವರ ಸಂಯೋಗವಾಗುವ ಸುಸಂಧಿಯನ್ನು ಕಳೆದುಕೊಳ್ಳಲೇಕೆ ತಂದೆಽ?

ಸೂರ್ಯ : (ಧ್ವನಿ) ಭಾಗ್ಯದಲ್ಲಿ ಬರೆದುದನ್ನು ತಪ್ಪಿಸಲು ಯಾರಿಂದ ಸಾಧ್ಯ? ಅದೋ, ಕುಂತೀದೇವಿ ಬಂದೇಬಿಟ್ಟಳು.

ಕರ್ಣ : ಬಾ, ತಾಯೀ.

ಕುಂತಿ : ಬಾ ತಾಯಿಽಽ! ಕಿವಿಯಲ್ಲಿ ಸವಿ ಜೇನನ್ನು ಸುರಿದಂತಾಯಿತು ಕಂದಾ. ಮತ್ತೊಮ್ಮೆ ಹೇಳು ಮಗು! ಬಾ ತಾಯಿ; ತಾಯಿ, ತಾಯಿ! ಅಹುದು; ಕುಂತೀದೇವಿ ಕರ್ಣನ ತಾಯಿಽಽ!

ಕರ್ಣ : ಕರ್ಣನ ತಾಯಿ ಕುಂತೀದೇವಿಯಲ್ಲ; ಅಧಿರಥ ಸಾರಥಿಯ ಧರ್ಮಪತ್ನಿ ರಾಧೆ. ಆಕೆಯೇ ನನ್ನ ಮಾತೃದೇವತೆ.

ಕುಂತಿ : ಅಲ್ಲ, ಅಲ್ಲ; ನಿನ್ನನ್ನು ಹೆತ್ತವಳು ನಾನು.

ಕರ್ಣ : ಹೆತ್ತವಳೆಂತೆಯೇ ಹಸುಳೆಯನ್ನು ಹೊಳೆಯಲ್ಲಿ ಹೊತ್ತೊಗೆದೆ! ಆ ಹಳೆಯ ಕಂತೆಯನ್ನು ಬಿಚ್ಚಬೇಡ ಕುಂತೀದೇವೀ. ಕೃಷ್ಣ ಎಲ್ಲವನ್ನೂ ತಿಳಿಸಿದ್ದಾನೆ.

ಕುಂತಿ : ಹಾಗಾದರೆ ಅರ್ಧ ಕೆಲಸ ಕೈಗೂಡಿದಂತಾಯಿತು. ಇನ್ನು ಪ್ರಥಮ ಪಾಂಡವನೆಂದು ನಿನ್ನ ಪಾಂಡವ ಬಂಧುಗಳನ್ನು ಕೂಡಿಕೊಳ್ಳುವೆಯಲ್ಲವೇ?

ಕರ್ಣ : ಉಂಡ ಮನೆಯನ್ನು ಅಗಲಿ ಹೋಗಬೇಕಾದುದು ಹೆಂಗಳೆಯರ ಹಣೆಬರಹ. ಉಂಡಲ್ಲಿ ಉಳಿದು ಧನಿಗಾಗಿ ದೇಹವನ್ನು ದಂಡಿಸುವುದೊಂದೇ ಗೊತ್ತು ಗಂಡುಗಲಿ ಕರ್ಣನಿಗೆ! ಪ್ರಥಮ ಪಾಂಡವ ಯಾರು? ನನಗೆ ಪಂಡುರಾಜ ತಂದೆಯಾಗಿದ್ದರೆ ನೀನೇಕೆ ನನ್ನನ್ನು ಹೊಳೆಯಲ್ಲಿ ಹರಿಬಿಡುತ್ತಿದ್ದೆ? ಪಾಂಡವರಿಗೂ ನನಗೂ ಸಂಬಂಧವೇನು? ನನ್ನನ್ನು ಪಾಂಡವನೆಂದು ಹೇಳಿ ಮಾತಿನ ಮದ್ದುಗುಣಿಕೆಯನ್ನು ನನಗೆ ತಿನ್ನಿಸಬೇಕೆನ್ನುವೆಯಲ್ಲ ಕುಂತೀದೇವೀ? ಕ್ಷೇತ್ರವೊಂದಾದ ಮಾತ್ರಕ್ಕೇನಾಯಿತು? ಬಿತ್ತಿದ ಬೀಜಗಳ ಜಾತಿ ಬೇರೆ ಬೇರೆ; ಎಂದ ಮೇಲೆ, ಬೆಳೆಗಳ ಜಾತಿಯೂ ಬೇರೆಯೇ ಆಗಬೇಕಲ್ಲವೇ? ನಾನು ಪಾಂಡವನೂ ಅಲ್ಲ, ಪಾಂಡವರನ್ನು ಕೂಡಿಕೊಳ್ಳುವುದೂ ಸಾಧ್ಯವಿಲ್ಲ.

ಕುಂತಿ : ಹಾಗೆ ಹೊರಗೈಯಿಂದ ಹೊಡೆಯಬೇಡ ಮಗೂಽಽ! ಈಗ ಈ ಕಲಹದ ಅಗ್ನಿಗೆ ತುಪ್ಪವನ್ನು ಎರಚಿ ಭುಗಿಲ್ ಎನಿಸುವುದಾಗಲಿ, ತಣ್ಣೀರನ್ನೆರಚಿ ಶಾಂತ ಮಾಡುವುದಾಗಲಿ ನಿನ್ನ ಕೈಯಲ್ಲಿಯೇ ಇದೆ ಕಂದಾ.

ಕರ್ಣ : ಬಹಳ ತಡವಾಗಿ ಹೇಳಿದೆ, ತಾಯೀ, ಈ ಮಾತುಗಳನ್ನು! ಆದರೂ ನನ್ನ ಮೇಲೆ ಉಪಕಾರ ಮಾಡಿರುವೆ. ಬಾಲ್ಯದಲ್ಲಿ ನಾನು ಧನುರ್ವಿದ್ಯೆಯ ಸೆಣಸಾಟಕ್ಕೆ ನಿಂತಾಗ ಮತ್ತು ದ್ರೌಪದೀ ಸ್ವಯಂವರ ಸಮಯದಲ್ಲಿ ಧನುರ್ಭಂಗಕ್ಕೆ ಸಿದ್ಧನಾದಾಗ ಎಲ್ಲರೂ ನನ್ನನ್ನು ಸೂತಪುತ್ರನೆಂದು ಕೊರಚಾಡಲಿಲ್ಲವೇ ? ಆಗ ನನಗೆ ನನ್ನ ಹೀನ ವಂಶದ ಬಗೆಗೆ ಎಷ್ಟೋ ಕೆಡುಕೆನಿಸಿತ್ತು. ಈಗ ಕೃಷ್ಣ ನನ್ನ ಜನ್ಮ ವೃತ್ತಾಂತವನ್ನು ತಿಳಿಸಿದ ಮೇಲೆ, ನಾನು ಸೂತಪುತ್ರನೆನಿಸಿಕೊಳ್ಳುವುದೇ ನನಗೆ ಶ್ರೇಯಸ್ಕಾರವಾಗಿ ತೋರುತ್ತಿದೆ. ಅಯ್ಯೋ, ಎಂತಹ ದುರ್ದೈವಿ ನಾನುಽಽ!

ಕುಂತಿ ಹಾಗೆ ಕೆಡುಕೆನಿಸಿಕೊಳ್ಳಬೇಡ ಕಂದಾ!

ಕರ್ಣ : ಕೆಡುಕೆನಿಸಿಕೊಳ್ಳಬಾರದೇ ಕುಂತೀದೇವಿ? ಮಾತೃರೂಪದಿಂದ ಮನೆ ಮನೆಗೆ ಅವತರಿಸುತ್ತಾನೆ ದೇವ, ಎಂದು ಶಾಸ್ತ್ರಗಳು ಸಾರುತ್ತಿವೆ. ಹೆತ್ತ ಹಸುಳೆಗಾಗಿ-ಈ ಕರ್ಣನಿಗಾಗಿ-ಅಂತಹ ದೇವಮೂರ್ತಿಯಲ್ಲೂ ದಯೆಯ ಸೆಲೆಯಿಲ್ಲದಾಯಿತಲ್ಲಽಽ! ಕುಂತೀದೇವೀ, ನಿನ್ನ ಬಸಿರಿನಿಂದ ಬಂದುದು ನನ್ನ ತಪ್ಪೇ ? ತಪ್ಪು ಯಾರದು, ಶಿಕ್ಷೆಯಾರಿಗೆ ?

ಕುಂತಿ : ಹಾಗೆ ಚುಚ್ಚಿ ಮಾತಾಡಬೇಡ ಕರ್ಣಾ.

ಕರ್ಣ : ಚುಚ್ಚುವದು ಹಾಗಿರಲಿ, ಕೊಚ್ಚಿ ಹಾಕುತ್ತಿದ್ದೆ ಮತ್ತಾರಾದರೂ ಈ ಪ್ರಸಂಗದಲ್ಲಿ ನನ್ನ ಇದಿರಿಗಿದ್ದರೆ! ಹೆತ್ತ ತಾಯಿಯೆಂದು ಕೈ ಕಾದಿರುವೆ. ಕುಂತೀದೇವೀ, ಈಗಲಾದರೂ ನನಗಾಗಿ ಮಾತೃಸ್ನೇಹದ ಲವಲೇಶವೂ ಇಲ್ಲ, ನಿನ್ನ ಹೃದಯದಲ್ಲಿ. ಮಗನೆಂದು ಮರುಕದ ಮಾತುಗಳನ್ನಾಡಿ ಮರಣದ ಹಾದಿಯನ್ನು ಹಿಡಿಸಲು ಬಂದಿರುವೆಯಲ್ಲವೇ ?

ಕುಂತಿ : ಹಾಗಿಲ್ಲ ಮಗೂ. ಹೆಂಗರುಳಿನ ಹೃದಯದಲ್ಲಿ ಮಕ್ಕಳ ಮರಣದ ಬಯಕೆಯಿರುವದಿಲ್ಲಪ್ಪಾ.

ಕರ್ಣ : ಹೊಳೆಯಲ್ಲಿ ಹರಿದುಹೋಗುತ್ತಿದ್ದ ನನ್ನನ್ನು ಮೀನ ಮೊಸಳೆಗಳು ತಿಂದು ತೇಗಲಿಲ್ಲವೆಂದು ನಿನಗೆ ಈ ಮಾತನ್ನಾಡುವ ಧೈರ್ಯ ಬಂದಿದೆ. ಅಷ್ಟೇ! ಸಾಕು; ಸೂರ್ಯದೇವನಿಂದ ಎಲ್ಲವನ್ನೂ ತಿಳಿದಿರುವೆ. ಇಲ್ಲದ ಹರಟೆಯನ್ನು ಹಚ್ಚಿ ಕಾಲಕಳೆಯಬೇಡ. ಬಂದ ಕಾರ್ಯವನ್ನು ಹೇಳಿಬಿಡು.

ಕುಂತಿ : ನಿನ್ನ ಬಂಧುಗಳೊಡನೆ ಬಡಿದಾಡುವದನ್ನು ಬಿಡುವದಿಲ್ಲವೆ?

ಕರ್ಣ : ವೀರಪುತ್ರಿ, ವೀರಪತ್ನಿ, ವೀರಮಾತೆಯೆಂಬ ಅಭಿಮಾನ ನಿನಗಿದ್ದರೆ ಮತ್ತು ನಾನು ನಿನ್ನ ಮಗನೆಂದು ತಿಳಿದಿದ್ದರೆ, ನಾನು ನಿಜವಾಗಿಯೂ ನಿನ್ನ ಮಗನೇ ಆಗಿದ್ದರೆ, ರಣಾಂಗಣದಿಂದ ಹಿಂದೆಯುವ ಹೇಡಿತನವನು ಹೇಳಬಾರದು ಈ ಕರ್ಣನಿಗೆ.

ಕುಂತಿ : ನೀನು ಸಹೋದರರೊಡನೆ ಸೆಣಸಾಡುವದು ಸರಿಯಲ್ಲ ಕಂದಾ.

ಕರ್ಣ : ನೀನು ನನ್ನನ್ನು ಹಡೆದವಳೇ ಆಗಿದ್ದರೆ ನನ್ನ ಹೃದಯದ ಹಂಬಲು ತಿಳಿಯಬೇಕಾಗಿತ್ತು ನಿನಗೆ. ಕಿರೀಟಿಯೊಡನೆ ಕಾದಾಡಬೇಕೆಂದು ಅದೆಷ್ಟೋ ವರುಷಗಳಿಂದ ನಿರೀಕ್ಷಿಸುತ್ತಿದ್ದೆ. ಈಗಲೀಗ ಸಮಯ ಸನ್ನಿಹಿತವಾಗಿದೆ. ಇಂತಹ ವೇಳೆಯಲ್ಲಿ......

ಕುಂತಿ : ಆದರೆ ಅರ್ಜುನ ನಿನ್ನ ತಮ್ಮ; ತಿಳುವಳಿಕೆಯಿಲ್ಲದ ತರುಣ. ಕಿರಿಯರೊಡನೆ ಕಲಹಮಾಡುವದು ಹಿರಿಯರಿಗೆ ಹಿತವಲ್ಲವಪ್ಪಾ.

ಕರ್ಣ : ಹಿತಾ ಹಿತಗಳನ್ನು ನಿರ್ಣಯಿಸುವ ಕಾಲ ಎಂದೋ ಕಳೆದು ಹೋಗಿದೆ. ಈಗ ಶಸ್ತ್ರಾಸ್ತ್ರಗಳನ್ನು ಸಜ್ಜುಗೊಳಿಸುವುದೊಂದೇ ಕಣ್ಣಿಗೆ ನಿಚ್ಚಳ ಕಾಣುಳವಾದ ಹಾದಿ. ಅಮ್ಮಾ, ಅನ್ನವನ್ನು ಕೊಟ್ಟವನನ್ನು ಅಲ್ಲಗಳೆದು ನಿಂದಕರ ನೆರವನ್ನು ಸೇರಿ ಜೀವಗಳ್ಳನೆನಿಸಿಕೊಳ್ಳಲೇ? ದೂಷಕನೊಬ್ಬ ದೇಶವನ್ನು ಕೊಟ್ಟರೂ ಆತನ ಹೊರೆಯಲ್ಲಿರುವದು ಕರಕಷ್ಟ!

ಕುಂತಿ : ಕರ್ಣಾ, ಕರ್ಣಾ, ಮಾತೃದೇವತೆಯ ಮಹತಿಗಿಂತಲೂ ನಿನಗೆ ಅನ್ನದ ರಿಣವೇ ಅಧಿಕವಾಗಿ ತೋರುತ್ತಿದೆಯೇ? ಹಾಗಿದ್ದರೆ ಆತಂಕವಿಲ್ಲದೇ ಆಯುಧಕ್ಕೆ ಕೈಹಾಕು. ಆದರೆ ಆ ಪೂರ್ವದಲ್ಲಿ ಈ ಕುಂತಿಯ

ಕತ್ತನ್ನು ಕತ್ತರಿಸಿಬಿಡು. ಆ ರಕ್ತ ರಂಜಿತವಾದ ಹೆಜ್ಜೆಗಳನ್ನಿಡುತ್ತಲೇ ರಣಕ್ಕೆ ಸಾಗಿಹೋಗುವೆಯೆಂತೆ; ಆಯಿತೇ, ಇನ್ನಾದರೂ ಸಮಾಧಾನ ?

ಕರ್ಣ : ಕುಂತೀದೇವೀ, ಹೆಂಗಳೆಯರ ಹೊಂಚುಗಾರಿಕೆಯನ್ನು ಅರಿಯದಷ್ಟು ಮೂರ್ಖನಿಲ್ಲ ನಾನು. ಮಗನ ಮರುಕವಿಲ್ಲದೆ ಹಸುಳೆಯನ್ನು ಹೊಳೆಯಲ್ಲಿ ಹರಿಬಿಟ್ಟ ನೀನು, ಈಗ ಮಾತೆಯೆಂದು ಮನ್ನಣೆ ಪಡೆಯುವ ಹುಚ್ಚು ಹಂಬಲವನ್ನು ಹಿಡಿಯ ಬೇಡ. ನಿನ್ನ ಇಷ್ಟವನ್ನು ಸ್ಪಷ್ಟವಾಗಿ ಹೇಳಿಬಿಡು ತಾಯಿ.

ಕುಂತಿ : ಆರುಜನ ಪಾಂಡವರ ತಾಯಿಯಾಗಬೇಕೆಂದು ಧಾವಿಸಿ ಬಂದೆ, ಈಗ ಬಂಜೆಯಾಗಿ ಬಂದ ದಾರಿಯನ್ನು ಹಿಡಿಯುತಿರುವೆ.

ಕರ್ಣ : ಬಂಜೆಯಾಗಲು ಕಾರಣವಿಲ್ಲವಲ್ಲ!

ಕುಂತಿ : ಕರ್ಣಾ, ಅರ್ಜುನನ ಅಂತ್ಯ ಮಾಡದೆ ಬಿಡುವದಿಲ್ಲ ನೀನು. ತಮ್ಮಂದಿರಲ್ಲಿ ಯಾರೊಬ್ಬರು ಸತ್ತರೂ ಉಳಿದವರೊಡನೆ ಅಗ್ನಿಪ್ರವೇಶ ಮಾಡುವೆನೆಂದು ಧರ್ಮರಾಜ ಪ್ರತಿಜ್ಞೆ ಮಾಡಿದ್ದಾನೆ. ನೀನಂತೂ ನನ್ನ ಮಗ ನೆಂದು ಜಗತ್ತು ಅರಿತಿಲ್ಲ, ಅರಿಯವುದೂ ಇಲ್ಲ. ಎಂದಮೇಲೆ, ಸತ್ತ ಮಕ್ಕ ಳನ್ನು ಹೆತ್ತೊಡಲು ಬಂಜೆಯಲ್ಲದೆ ಮತ್ತೇನು? ಪಾಂಡವರ ತಾಯಿಯೆಂಬ ಹೆಗ್ಗಳಿಕೆ ಬರಿಯ ಬಾಯ್ಮಾತಾಗಿಯೇ ಉಳಿಯಿತು.

ಕರ್ಣ : ಚಿಂತಿಸಬೇಡ ಕುಂತೀದೇವೀ. ಅಯ್ವರು ಪಾಂಡವರು ಆರು ಜನರಾಗುವದು ಅಶಕ್ಯವಾಗಿದ್ದಂತೆ, ನಿನ್ನ ಬಸಿರು ಬಂಜೆಯಾಗುವದೂ ಅಸಾಧ್ಯವೇ. ಪಂಚ ಪಾಂಡವರ ತಾಯಿಯೆಂಬ ಬಿರುದು ಬಯಲಾಗುವ ದಿಲ್ಲ. ನಾನು ನಿನ್ನ ಮಗನೆಂಬ ಅಭಿಮಾನ ನಿನಗಿದ್ದರೆ–ಅರ್ಜುನ ಸತ್ತರೆ ಕರ್ಣನನ್ನು ಕೂಡಿಕೊಂಡು ಅಯ್ದು ಜನ ಕೌಂತೇಯರಾಗುವರು. ಕರ್ಣನೇ ಸತ್ತರಂತೂ ಪಂಚ ಪಾಂಡವರ ತಾಯಿಯೆಂಬ ನಿನ್ನ ಬಿರುದಿಗೆ ಭಯವೇ ಇಲ್ಲವಲ್ಲ.

ಕುಂತಿ : ಅಂತೂ ಮಕ್ಕಳ ಮರಣವನ್ನು ಕಣ್ಣಾರೆ ಕಾಣಬೇಕೆಂದು ಕುಂತಿಯ ಹಣೆಯಲ್ಲಿ ಬರೆದಿದೆಯಷ್ಟೇ!

ಕರ್ಣ : ದೈವೇಚ್ಛೆಯನ್ನು ಬದಲಿಸಲು ಯಾರಿಗೂ ಸಾಧ್ಯವಿಲ್ಲ. ತಾಯಿ.

ಕುಂತಿ : ಸಾಧ್ಯವಿದೆ; ಅದು ಕೂಡ ನಿನ್ನ ಕೈಯಲ್ಲಿಯೇ ಇದೆ.

ಕರ್ಣ : ಅಮ್ಮಾ,ನಾನೇನು ಮಾಡಬೇಕೆಂಬುದನ್ನು ಸ್ವಲ್ಪದರಲ್ಲಿಯೇ ಹೆಬೀಳಿಡು. ಈ ಕರ್ಮಕಟಕಟಿ ಕೊನೆಗಾಣಲಿ.

ಕುಂತಿ : ಕರ್ಮಕಟಕಟಿಯಲ್ಲಿ ಕಂದಾ ! ಭವಿಷ್ಯದ ಭೀಕರತೆ ಕಣ್ಮುಂದೆ ಕಟ್ಟಿದಂತಾಗಿ ಕರುಳುಗಳು ಮೊರೆಯುತಿವೆ; ಬಾಯ್ಬಿಟ್ಟು ಬೇಡುತಿವೆ.

ಕರ್ಣ : ಆ ಬೇಡಿಕೆಯನ್ನು ತಿಳಿಸುವದಕ್ಕೆ ಉ ?

ಕುಂತಿ : ಕರ್ಣಾ, ಕೊನೆಯ ಮಾತಿದು; ನಡೆಸಿಕೊಡು. ನಾನು ಎಷ್ಟೇ ಬೇಡ ಬೇಡವೆಂದರೂ ನೀನು ಅರ್ಜುನನೊಡನೆ ಯುದ್ಧ ಮಾಡಿಯೇ ತೀರುವೆ. ಆದರೆ ನನ್ನ ಬೇಡಿಕೆಯಿಷ್ಟೇ: ಕಾಳೆಗದ ಕಣದಲ್ಲಿ ಕೌರವನ ಕುಟಿಲತನಕ್ಕೆ ಎಡೆಗೊಡಬೇಡ. ನಿನ್ನ ವೀರತ್ವಕ್ಕೆ ತಕ್ಕಂತೆ ಯುದ್ಧ ಮಾಡು; ತೊಟ್ಟ ಬಾಣವನ್ನು ತೊಡಬೇಡ, ಇಟ್ಟ ಗುರಿಯನ್ನು ತೆಗೆಯಬೇಡ.

ಕರ್ಣ : ಇದರಿಂದ ಕರ್ಣನ ಕಡುಗಲಿತನಕ್ಕೆ ಕಟ್ಟು ಹಾಕಿದಂತಾಗ ಲಿಲ್ಲ ತಾಯೀ. ಅಸಂಖ್ಯಾತ ಶಸ್ತ್ರಾಸ್ತ್ರಗಳ ಯುದ್ಧದಲ್ಲಿ, ಯುದ್ಧವಿದ್ಯೆಯ ಅನೇಕ ವರಸೆಗಳಲ್ಲಿ ಎತ್ತಿದ ಕೈಯೆನಿಸಿದ ಕರ್ಣನಿಗೆ ಎಂಜಲು ಬಾಣಗಳ ಅವಶ್ಯಕತೆಯಿಲ್ಲ. ಆಯಿತು; ಮತ್ತೇನಾದರೂ ಹೇಳುವದಿದೆಯೇ?

ಕುಂತಿ : ಹೆತ್ತೊಡಲ ಹಂಬಲುಗಳಿಗೆ ಕೊನೆಯುಂಟೇ ಕಂದಾ? ಆದರೆ ನೀನು ನನ್ನನ್ನು ತಾಯಿಯೆಂದೇ ತಿಳಿಯುವದಿಲ್ಲ. ಎಂದಮೇಲೆ ಮುಂದೇನು ಮಾತನಾಡಲಿ?

ಕರ್ಣ : ಮುಂದೇನು ಮಾತನಾಡುವದೂ ಬೇಡ. ಕರ್ಣನ ತಾಯಿ ಯೆಂಬ ಅಭಿಮಾನ ನಿನಗಿದ್ದರೆ, ಮಾತೇ, ನನ್ನದೊಂದು ಮಾತನ್ನು ನಡೆಸಿ ಕೊಡುವೆಯಾ?

ಕುಂತಿ : ಹೇಳು, ಹೇಳು ಕಂದಾ. ನಿನಗಾಗಿ ನನ್ನ ಪ್ರಾಣಗಳನ್ನೂ ಪಣಕ್ಕೆ ಹಚ್ಚುವೆ.

ಕರ್ಣ ಅಷ್ಟೇನೂ ಕಷ್ಟದ ಕಾರ್ಯವಿಲ್ಲ. ಅಮ್ಮಾ, ನನ್ನ ಹುಟ್ಟು ಮೆಟ್ಟುಗಳು ನೀನು ಮತ್ತು ಕೃ ಈ ಇಬ್ಬರ ಹೊರತಾಗಿ ಬೇರೆಯಾರಿಗೂ ತಿಳಿದಿಲ್ಲ. ಸೂತ ಪುತ್ರ, ಸೂತ ಪುತ್ರ ಎಂದು ನಕಲಸೃಷ್ಟಿಯೇ ಒಕ್ಕೊರಲಿನಿಂದ ಒದರಿದರೂ ಅದನ್ನು ಸಹಿಸಿಕೊಳ್ಳಬಲ್ಲೆ; ಆದರೆ ತಂದೆಯಿಲ್ಲದ ಮಗನೆಂಬ ಅಪಮಾನದ ಅಗ್ನಿಯನ್ನು ಅಡಗಿಸಿಕೊಳ್ಳಲಾರೆ. ಅದಕ್ಕಾಗಿ ನನ್ನ ಜನ್ಮ ವೃತ್ತಾಂತವನ್ನು, ತಾಯೀ, ನಾನು ಜೀವದಿಂದ ಇರುವವರೆಗೂ ನೀನು ಎಲ್ಲಿಯೂ ಬಾಯಿ ಬಿಡಬಾರದು.

**ಕುಂತಿ :** ಅಯ್ಯೋ ಹಾಳಾದ ಹೆಣ್ತನದ ಹಂಬಲವೇಽಽ!

**ಕರ್ಣ :** ಕೆಡುಕೆನಿಸಿಕೊಳ್ಳಬೇಡ ತಾಯೀ! ಮುಗಿದು ಹೋದ ಮಾತಿಗೆ ಮರುಗಿದರೆ ಮರಳಿ ಬರುವಂತಿಲ್ಲವಲ್ಲ! ಕೊನೆಯ ಬೇಡಿಕೆಯನ್ನು ಚಿತ್ತಕೊಟ್ಟು ಕೇಳು: ಕರ್ಣನ ಕೊನೆಗಾಲಕ್ಕಾಗಿ ಸುತ್ತಲೂ ಮುತ್ತಿಗೆ ನಡೆದಿದೆ. ಅರ್ಜುನನ ತಂದೆಯಾದ ಇಂದ್ರ ಕಪಟವೇಷದಿಂದ ನನ್ನ ಕವಚ ಕುಂಡಲಗಳನ್ನು ಬೇಡಿ ಒಯ್ದಿದ್ದಾನೆ. ಕಾರಸ್ಥಾನಿಯಾದ ಕೃಷ್ಣ ನನ್ನ ಜನ್ಮವೃತ್ತಾಂತವನ್ನು ತಿಳಿಸಿ ನನ್ನ ಎದೆಗೆ ಅರೆಗಾಯವನ್ನು ಮಾಡಿದ್ದಾನೆ. ಮೇಲೆ ನೀನೂ ತೊಟ್ಟ ಬಾಣವನ್ನು ತೊಡದಂತೆ, ಇಟ್ಟ ಗುರಿಯನ್ನು ತೆಗೆಯದಂತೆ ಆಣೆಯಿಟ್ಟಿರುವೆ! ಒಟ್ಟಾರೆ,ನೀವೆಲ್ಲ ಕರ್ಣನ ಕೌಶಲಕ್ಕೆ ಸಂಚಕಾರವನ್ನು ತಂದಿರುವಿ. ಎಂದಮೇಲೆ, ಕರ್ಣನ ಕೊನೆಗಾಲಕ್ಕೆ ಇನ್ನು ಕ್ಷಣವೂ ತಡೆಹಿಡಿಯುವುದಿಲ್ಲ.

**ಕುಂತಿ :** ಅಭದ್ರವನ್ನು ಆಡಬೇಡ ಮಗು.

**ಕರ್ಣ :** ಅಸತ್ಯವನ್ನು ಆಡಿಗೊತ್ತಿಲ್ಲ ಈ ಸೂರ್ಯಪುತ್ರನಿಗೆ. ತಾಯೀ, ನಾನು ಹಸುಳೆಯಿದ್ದಾಗ ನನಗಾಗಿ ನೀನೇನೂ ಮಾಡಲಿಲ್ಲ. ಈಗಲಾದರೂ ನನಗಾಗಿ ನಿನ್ನ ತಾಯ್ತನದ ಕರುಳು ಮಿಡಿಯುತ್ತಿದ್ದರೆ, ಮಮತೆಯ ಮಧುರರಸವೊಸರುತ್ತಿದ್ದರೆ......

**ಕುಂತಿ :** ಇನ್ನೂ ನನ್ನಲ್ಲಿ ನಿನಗೆ ಸಂಶಯವೇ ಕಂದಾಽಽ ?

**ಕರ್ಣ :** ಇಲ್ಲ, ಇಲ್ಲ. ಹಾಗಾದರೆ ಇದೊಂದು ಮಾತನ್ನು ತಪ್ಪದೆ ನಡೆಸು. ಈ ಭಾರತ ಯುದ್ಧದಲ್ಲಿ ಕಾರಸ್ಥಾನಿಯಾದ ಕೃಷ್ಣ ಕಿರೀಟಿಗೆ

ಸಾರಥಿಯಾಗಿರುವುದರಿಂದ ಕೌರವನಿಗೆ ಸೋಲು, ಕರ್ಣನಿಗೆ ಸಾವು ಸ್ವತಃ ಸಿದ್ಧ ! ನಾನು ಸತ್ತ ಮೇಲೆ ನನ್ನ ದೇಹದ ಅಂತ್ಯವಿಧಿಯನ್ನು ಮಾತ್ರ...

(ಕುಂತಿ ಬಿಕ್ಕಿ ಬಿಕ್ಕಿ ಅಳುವಳು)

ಅಳಬೇಡತಾಯೀ ಸರಿಯಾಗಿ ಕೇಳಿಕೊಳ್ಳು...... ಆಮೇಲೆ ನನ್ನ ಅಂತ್ಯವಿಧಿಯನ್ನು ಮಾತ್ರ ಕ್ಷಾತ್ರವಿಧಿಪೂರ್ವಕವಾಗಿ ಧರ್ಮಾತ್ಮಾ ಧರ್ಮ ರಾಜನ ಕೈಯಿಂದಲೇ ನೆರವೇರಿಸಬೇಕು.

ಕುಂತಿ : (ಅಳುತ್ತ) ಹಾಯ್ ಕಂದಾ, ಹೆತ್ತ ಕರುಳಿಗೆ ಕೊಳ್ಳಿಯನ್ನು ಕೊಡುವ ಈ ಕಟುವಚನಗಳನ್ನು......! (ದುಃಖಒತ್ತರಿಸಿ ಸುಮ್ಮನಾಗು ವಳು.)

ಕರ್ಣ : ಕಣ್ಣೀರು ಕರೆಯುವೆ ಏಕೆ ತಾಯೀಽಽ ? ಭವಿತವ್ಯವನ್ನು ಬದಲಿಸಲು ನನಗೆ, ನಿನಗೆ—ಇಷ್ಟೇ ಅಲ್ಲ–ಯಾವ ಮನುಷ್ಯ ಮಾತ್ರರಿಗೂ ಸಾಧ್ಯವಿಲ್ಲ. ಎಂದಾದರೂ ಎಲ್ಲಿಯಾದರೂ ಬಿದ್ದುಹೋಗುವ ದೇಹವಿದು ! ಇದು ರಣಭೂಮಿಯಲ್ಲಿ ಪಿಶಾಚಿಗಳಿಗೆ ಆಹಾರವಾಗುವ ಬದಲು ಆ ಪುಣ್ಯಾತ್ಮನ ಕೈಯಿಂದ ಸಂಸ್ಕಾರ ಪಡೆಯಲಿ, ಎಂದಿಷ್ಟೇ ಆಸೆ. ಆಗಬಹುದೇ ತಾಯಿಽಽ ?

ಕುಂತಿ : ಕಂದಾ, ಇದಕ್ಕೆ ಉತ್ತರವನ್ನು ಕೊಡುವ ಮೊದಲೇ ನನ್ನ ಪಂಚಪ್ರಾಣಗಳು ಹೊರಟುಹೋಗಲಿಲ್ಲವಲ್ಲಽಽ !

ಕರ್ಣ : ಬದುಕಬೇಕು ತಾಯೀ, ಪಂಚ ಪಾಂಡವರ ಸಂರಕ್ಷಣಕ್ಕಾಗಿ ಕುಂತೀದೇವಿ ಬದುಕಲೇ ಬೇಕು. ನನಗೆ ಮಾತ್ರ ವೀರಸ್ವರ್ಗ ಸಿಕ್ಕಲೆಂದು ಸಂತೋಷದಿಂದ ಹರಸು ತಾಯೀ. ಇದೋ, ಕೊನೆಯ ನಮಸ್ಕಾರ.

(ನಮಸ್ಕರಿಸುವನು. ಕುಂತಿ ದುಃಖಿಸುತ್ತ ಅಭೀಷ್ಟ ಸಿದ್ಧಿಯಾಗಲಿ, ಎಂದು ಹರಸುವಳು.)

## ೨ನೆಯ ಕೇಳಿಕೆ

[ನಿವೇದಕ: ಕೌರವೇಶ್ವರನ ಶಿಬಿರದಲ್ಲಿ ಭೀಷ್ಮ ದ್ರೋಣಾದಿಗಳ ನಂತರ ಸೇನಾಪತಿ ಪಟ್ಟ ಯಾರಿಗೆ ಎಂಬ ವಿಚಾರದಲ್ಲಿ ಕೌರವ ಕುಳಿತಿದ್ದಾನೆ. ಆ ಹೊತ್ತಿಗೆ ಸರಿಯಾಗಿ ಕರ್ಣ ಬರುತ್ತಾನೆ. ವೈತಾಳಿಕರು:

ಪುಂಡ ಪಾಂಡವ ಗಂಡ, ಚಂಡವಿಕ್ರಮ ವಿಜಿತ ಪೌರುಷ ಪ್ರಚಂಡ, ವಿಶ್ವವಿಖ್ಯಾತ ದಾನಶೌಂಡ, ಆಖಂಡಲ ಸುತ ಸಂಹಾರ ಬಲವದ್ದೋರ್ದಂಡ ಅಂಗಮಂಡಲಾಧೀಶ ಕರ್ಣಮಹಾಮಂಡಲೇಶ್ವರ ಬಹುಪರಾsssಕ !]

ಕೌರವ : ಬರಬೇಕು, ಬರಬೇಕು. ಅಂಗರಾಜಾ,ಆಯುಷ್ಮಂತನಾಗು.

ಕರ್ಣ : ಕೌರವೇಶ್ವರನ ಕೃಪೆಯಿರುವ ವರೆಗೂ ಅಂಗರಾಜ ಆಯುಷ್ಮಂತನೇ ಸರಿ.

ಕೌರವ : ಕರ್ಣನ ಕಡುಗಲಿತನಕ್ಕೆ ಕೌರವನ ಕೃಪೆ ಕಾರಣವಿಲ್ಲ !

ಕರ್ಣ : ಉಪಕೃತನಾದೆ. ಮತ್ತೇನು ? ಅಪ್ಪಣೆಯಾಗಬೇಕು.

ಕೌರವ : ಭಾರತಯುದ್ಧ ಆರಂಭವಾಗಿ ಹದಿನಾರು ದಿನಗಳಾದವು. ರಣದೇವಿಯ ಕೈಯೊಳಗಿನ ಜಯಾಪಜಯದ ತಕ್ಕಡಿಯ ಪರಡೆಗಳು ಅತ್ತೊಮ್ಮೆ ಇತ್ತೊಮ್ಮೆ ಹೊಯ್ದಾಡುತ್ತಲಿವೆ. ಭೀಷ್ಮರು ಶರಪಂಜರದಲ್ಲಿ ಶಯನ ಮಾಡಿದರು.

ಕರ್ಣ : ಮನಸ್ಸಿಲ್ಲದೆ ಮುಂದಾಳುಗಳಾಗಿ ಕಾರಣವಿಲ್ಲದೆ ಕೈದುಗಳನ್ನು ಚೆಲ್ಲಿಕೊಟ್ಟ ಮಹಾಪುರುಷರವರು.

ಕೌರವ : ದ್ರೋಣಾಚಾರ್ಯರು ದೇಹತ್ಯಾಗ ಮಾಡಿದರು.

ಕರ್ಣ : ಸ್ವಾರ್ಥಸಾಧನೆಗೆ ಸಂಚಕಾರ ಬಂದಕೂಡಲೆ ಉಂಡ ಅನ್ನದ ಅರಿವು ಕೂಡ ಉಳಿಯಲಿಲ್ಲ ಆ ಮಹಾಬ್ರಾಹ್ಮಣನಿಗೆ. ಅಶ್ವತ್ಥಾಮ ಸತ್ತನೆಂಬ ಸದ್ದಿನಿಂದ, ಕುರುವಂಶದ ಸಿಂಹಾಸನದ ಮೇಲೆ ತನ್ನ ಕುಮಾರನನ್ನು ಕುಳ್ಳಿರಿಸಬೇಕೆಂಬ ಅವರ ಕನಸಿನ ಕಟ್ಟಡವೇ ಕುಸಿದುಬಿದ್ದಿತು.

**ಕೌರವ** : ಕರ್ಣರಾಜಾ ಆದದ್ದಾಯಿತು; ಮುಂದೆ ಸೇನಾಪತಿ ಪಟ್ಟ ಯಾರಿಗೆ ?

**ಕರ್ಣ** : ಕೃಪಾಚಾರ್ಯ, ಅಶ್ವತ್ಥಾಮಾಚಾರ್ಯ, ಶಲ್ಯರಾಜ ಇವ ರೆಲ್ಲರನ್ನೂ ವಿಚಾರ್......

**ಕೌರವ** : ಕರ್ಣಾ, ಇದು ನಿನ್ನ ವಿನಯಶೀಲತೆಗೆ ಒಪ್ಪತಕ್ಕದ್ದೇ. ಆದರೆ,ನನ್ನೊಡನೆ ಮುಚ್ಚು ಮರೆಯಿಲ್ಲದೆ ಮಾತನಾಡು. ಕರ್ಣನೊಬ್ಬನನ್ನೇ ನಂಬಿಕೊಂಡು, ಕೌರವೇಶ್ವರ ರಣರಂಗದಲ್ಲಿ ಕಾಲಿಟ್ಟಿರುವನೆಂಬುದನ್ನು ಮರೆಯಬೇಡ. ನಿನಗೆ ಈ ಕೌರವನ ಸಿಂಹಾಸನ ಬೇಕಿದ್ದರೂ ಹೇಳು; ಈಗಲೇ ಪಟ್ಟಗಟ್ಟುವೆ. ಮಾತ್ರ, ಪಾಂಡವರ ಪರಿಸಮಾಪ್ತಿಯನ್ನು ಮಾಡಲೇಬೇಕು.

**ಕರ್ಣ** : ಕೌರವೇಶ್ವರಾ, ನಿತ್ಯದ ಅಪಜಯದಿಂದ ನೊಂದಹೃದಯಕ್ಕೆ ಮತ್ತಿಂತಹ ಅವಿಶ್ವಾಸದ ಬರೆಯನ್ನು ಕೊಟ್ಟೆಯಲ್ಲ! ಇಷ್ಟುಕಾಲದ ನಿಕಟ ಸಂಬಂಧದಲ್ಲಿಯೂ ಈ ಕರ್ಣನ ಹೃದಯಪರೀಕ್ಷೆ ಮಾಡಲಿಲ್ಲವೇ ? ನಿಮ್ಮ ಅನ್ನದಿಂದ ಬೆಳೆದ ಈ ದೇಹವನ್ನು ನಿಮಗೆ ಮುಡಿಪು ಮಾಡಿರುವೆ. ಈ ಭೂಮಂಡಲದ ಭೂಪಾಲಪದವಿಯನ್ನಷ್ಟೇ ಏಕೆ, ಸ್ವರ್ಗ ಸಿಂಹಾಸನದ ಸಮ್ರಾಟ್ ಪದವಿಯನ್ನೂ ಆಶಿಸಲಿಲ್ಲ ನಾನು. ಕೌರವೇಶ್ವರನಿಗೆ ಕೃತಜ್ಞ ನಾಗಿರಬೇಕು. ಆತನಿಗಾಗಿಯೇ ದುಡಿಯಬೇಕು, ಆತನಿಗಾಗಿಯೇ ಮಡಿಯಬೇಕು, ಇದೊಂದೇ ಕರ್ಣನ ಮನೀಷೆ!

**ಕೌರವ** : ಹಾಗಾದರೆ, ಸೇನಾಪತಿ ಪಟ್ಟದ ಸಮಾರಂಭವನ್ನು ಸಾಗಿಸಲೇ?

**ಕರ್ಣ** : ಆಗಬಹುದು; ಆದರೆ ಸುಯೋಧನ ಸಮ್ರಾಟಾ, ನನ್ನ ದೊಂದು ಕೋರಿಕೆ.........

**ಕೌರವ** : ಮುಚ್ಚುಮರೆಗೆ ಅವಕಾಶವಿಲ್ಲ ಕರ್ಣಾ. ಸ್ಪಷ್ಟವಾಗಿ ಹೇಳು.

**ಕರ್ಣ** : ತಮ್ಮಂದಿರಲ್ಲಿ ಯಾರೊಬ್ಬರು ನತ್ತರೂ ಉಳಿದವರೊಡನೆ ಅಗ್ನಿಪ್ರವೇಶ ಮಾಡುವೆನೆಂದು ಧರ್ಮರಾಜ ಪ್ರತಿಜ್ಞೆ ಮಾಡಿದ್ದಾನೆಂತೆ.

ನಾನು ಕಿರೀಟಿಯನ್ನು ಕೊಂದೇ ತೀರುವೆ. ಆದರೆ ಅವನಿಗೆ ಕಾರಸ್ಥಾನಿಯಾದ ಕೃಷ್ಣ ಸಾರಥಿಯಾಗಿದ್ದಾನೆ. ಅವನಿಗೆ ಸರಿತೂಗುವ ಸಾರಥಿ ನಮ್ಮಲ್ಲಿ ಶಲ್ಯರಾಜನೊಬ್ಬನೇ. ಆತನೇನಾದರೂ ನನಗೆ ಸಾರಥಿಯಾಗಲು ಒಪ್ಪಿಕೊಂಡರೆ ನಾಳೆ ಸಂಧ್ಯಾಸಮದೊಳಗಾಗಿಯೇ ಪಾಂಡವರ ಪರಿಸಮಾಪ್ತಿ ಆಗಿಯೇತೀರುವದು. ಆದರೆ ಶಲ್ಯರಾಜನನ್ನು ಒಪ್ಪಿಸುವ......

**ಕೌರವ :** ಅದನ್ನು ನಾನು ಮಾಡುವೆ. ಈಗ ಸೇನಾಪತಿ ಪಟ್ಟದ ಕಾರ್ಯ ನೆರವೇರಲಿ. ಸೇವಕಾ, ಮಂಗಳ ವಾದ್ಯ ಮೊಳಗಲಿ, ಸಕಲ ರಾಜರಿಗೂ ಆಮಂತ್ರಣ ಭೇರಿಯನ್ನು ಬಾರಿಸು, ಪುರೋಹಿತರೂ ನರ್ತಕಿಯರೂ ಬರಲಿ.

(ವಾದ್ಯಗಳ ಧ್ವನಿ, ಪುರೋಹಿತರ ಮಂತ್ರವಾಚನ ನಿನಾದ, ನರ್ತನ ಪ್ರಸಂಗ)

ಕೃಪ ಅಶ್ವತ್ಥಾಮಾಚಾರ್ಯರೇ, ಮದ್ರದೇಶಾಧಿಪತಿ ಶಲ್ಯರಾಜಾದಿ ಹಿರಿಯರೇ ಮತ್ತು ಸಕಲ ಸಾಮಂತ ಭೂಪಾಲರೇ, ನಾಳಿನ ದಿನದ ಸಂಗ್ರಾಮದ ಸೇನಾಪತಿ ಪಟ್ಟವನ್ನು ಅಂಗಮಂಡಲಾಧಿಪ ವೀರಾಗ್ರಣಿ ಕರ್ಣನಿಗೆ ಕೊಡಬೇಕೆಂದು ನನ್ನ ಇಚ್ಛೆಯಿದೆ. ಇದನ್ನು ನೀವೆಲ್ಲರೂ ಸಮ್ಮತಿಸುವಿರೆಂದು ನಂಬಿರುವೆ. (ಚಪ್ಪಾಳೆ) ಪುರೋಹಿತರೇ ಸ್ವಸ್ತಿವಾಚನ ಮಂತ್ರಗಳಾಗಲಿ. (ಮಂತ್ರ ಪಠಣ) ಕರ್ಣ ದಂಡಾಧೀಶರೇ, ಕುರು ಸಿಂಹಾಸನದ ಸ್ವಾಮಿನಿಯಾದ ಈ ಖಡ್ಗದೇವತೆಯನ್ನೂ ಈ ವಜ್ರಕವಚದ ಶಸ್ತ್ರಾಭರಣವನ್ನೂ ಸ್ವೀಕರಿಸಬೇಕು.

**ಕರ್ಣ :** ಅನುಗ್ರಹೀತನಾದೆ ಸಮ್ರಾಟರಿಂದ.

**ಕೌರವ :** ಇನ್ನು ಶಲ್ಯರಾಜನ ಹೊರತಾಗಿ ಎಲ್ಲರೂ ನಿಮ್ಮ ನಿಮ್ಮ ಶಿಬಿರಗಳಿಗೆ ಹೋಗಬಹುದು. ( ಎಲ್ಲರೂ ಹೋಗುವರು. ರಾಷ್ಟ್ರಗೀತೆಯ ವಾದ್ಯಧ್ವನಿ ಮುಗಿಯುವುದು. )

**ಶಲ್ಯರಾಜ :** ಏಕೆ ಸುಯೋಧನ ಸಮ್ರಾಟಾ, ಮಾಡುವುದೆಲ್ಲ ಮುಗಿದ ಮೇಲೆ ಈ ಶಲ್ಯನನ್ನೇಕೆ ನಿಲ್ಲಿಸಿಕೊಂಡೆ?

**ಕೌರವ :** ಮದ್ರರಾಜಾ, ಇನ್ನಾದರೂ ಈ ಒಣ ಹೆಮ್ಮೆಯ ಮಾತುಗಳು ಮಗಿದು ಹೋಗಲಿ. ನಮ್ಮಲ್ಲಿ ವೀರಾಗ್ರಣಿಗಳಿಗೇನೂ ಕೊರತೆಯಿಲ್ಲ; ಆದರೆ, ನಮ್ಮನಮ್ಮಲ್ಲಿಯ ಮತ್ಸರವೇ ನಮ್ಮನ್ನು ಮಣ್ಣು ಮುಕ್ಕಿಸುತ್ತಲಿವೆ. ಇನ್ನಾದರೂ ಮುಂದಾಳುಗಳ ಮಾತಿಗೆ ಮನ್ನಣೆ ಕೊಡುವುದನ್ನು ಕಲಿಯೋಣ; ಸಿಂಹಾಸನದ ಸದಭಿಮಾನದಿಂದ ಸರ್ವರೂ ಸೇನಾಪತಿಗೆ ಸಹಾಯವನ್ನು ಒದಗಿಸೋಣ.

**ಶಲ್ಯರಾಜ :** ಸಾಗಲಿ; ಉಪಕ್ರಮವೇನೋ ವಿಚಿತ್ರವಾಗಿದೆ.

**ಕೌರವ :** ವಿಚಿತ್ರವೆಲ್ಲಿಬಂತು? ಪಾಂಡವರಿಂದಲೇ ಈ ಪಾಠವನ್ನು ಕಲಿಯಬೇಕಾಗಿದೆ. ಶ್ರೀಕೃಷ್ಣ ಯಾದವಕುಲ ಭೂಪಾಲ. ಆದರೂ ಆತನು ಅರ್ಜುನನಿಗೆ ಸಾರಥಿಯಾಗಿ ನಿಂತಿಲ್ಲವೇ? ಕರ್ಣನ ವೈರವಿರುವುದೆಲ್ಲ ಅರ್ಜುನನ ಸಂಗಡವೇ. ಎಂದಮೇಲೆ ಕೃಷ್ಣನಂತೆ ನಮ್ಮಲ್ಲಿ ಸಾರಥ್ಯ ಕುಶಲರೊಬ್ಬರು ಕರ್ಣನಿಗೆ ಸಾರಥಿಯಾಗಿ ನಿಲ್ಲಬೇಡವೇ?

**ಶಲ್ಯರಾಜ :** ನೇರವಾಗಿ ನನ್ನ ಸಮೀಪಕ್ಕೆ ಬಂದೆಯಲ್ಲ?

**ಕೌರವ :** ಹಾಗೆ ನೋಡಿದರೆ, ನಿಮ್ಮೆದುರಿಗೆ ಕುದುರೆಗಳ ಕಡಿವಾಣಕ್ಕೆ ಕೈಹಾಕುವ ಕೌಶಲವೆಲ್ಲಿಯದು ಕೃಷ್ಣನಿಗೆ? ನಿಮ್ಮ ರಥದ ಕುದುರೆಗಳ ಮುಂದೆ ವಾಯುದೇವನೂ ಓಡಲಾರ.

**ಶಲ್ಯರಾಜ :** ಅಂತೂ ಆ ಸೂತಪುತ್ರನಿಗೆ ಈ ಕ್ಷಾತ್ರಸಂಪನ್ನನು ಸಾರಥಿಯಾಗಬೇಕೇ? ಕಡುಗಲಿಯೊಬ್ಬನನ್ನು ಕೀಳು ಕೆಲಸಕ್ಕೆ ಕಳಿಸುವದೂ ಹೇಡಿಯೊಬ್ಬನನ್ನು ಹಿರಿಮಣಿಯನ್ನು ಮಾಡುವದೂ ಸಮ್ರಾಟರಿಗೇ ಶೋಭಿಸುವದಲ್ಲವೇ?

**ಕೌರವ :** ರಾಜಾ, ಎಷ್ಟು ತೂಕ ತಪ್ಪಿ ಮಾತನಾಡುವೆ? ಕರ್ಣನ ಮುಖದ ತೇಜಸ್ಸೌಂದರ್ಯ, ಹೃದಯದ ಔದಾರ್ಯ, ಶಸ್ತ್ರಾಸ್ತ್ರಗಳ ಶೌರ್ಯ ಇವುಗಳನ್ನು ಕಂಡೂ ಕಂಡೂ ಸೂತನೆನ್ನುವೆಯಲ್ಲ ಆತನನ್ನು? ಕ್ಷಾತ್ರಕುಲೋತ್ಪನ್ನರಿಗಿಂತ ಯಾವ ವಿಚಾರದಲ್ಲಿ ಕಡಿಮೆಯಿದ್ದಾನೆ ಕರ್ಣ? ಕಿರೀಟಿಗೆ ಕೊನೆಗಾಲವನ್ನು ಕಾಣಿಸುವುದು ಕರ್ಣನಿಗೊಬ್ಬನಿಗೇ ಸಾಧ್ಯವಿದೆ.........

**ಶಲ್ಯರಾಜ :** ಹುಚ್ಚು ನಿನಗೆ! ಸಿಂಹವನ್ನು ಸಂಹರಿಸ ಬಲ್ಲದಂತೆ ನರಿಯ ಕುನ್ನಿ! ಆಗಲಿ; ಬೆಳಗಾದರೆ ಯುದ್ಧವಿದೆ. ಕೈಯಲ್ಲಿಯೇ ಕಲ್ಲು ತಕ್ಕಡಿಗಳಿದ್ದಮೇಲೆ ತೂಗುವದಕ್ಕೆ ತಡೆಯಾದೀತೇ?

**ಕೌರವ :** ರಾಜಾ, ಈ ಪರಪಕ್ಷಾಭಿಮಾನವೇ ನಮಗೆ ಅಪಜಯವನ್ನು ಒಡ್ಡುತ್ತಲಿದೆ. ನಮ್ಮ ನಮ್ಮ ಹೊಣೆಗಾರಿಕೆಯನ್ನು ತಿಳಿದು ನಡೆಯೋಣ. ಮುಂದಾಳುಗಳನ್ನು ಮನಬಲ್ಲಂತೆ ಹಳಿಯುವದು ಹೊಣೆಗಾರಿಕೆಯ ಲಕ್ಷಣವಲ್ಲ.

**ಶಲ್ಯರಾಜ :** ಆಗಲಿ ಕೌರವೇಶ್ವರಾ, ನನ್ನ ನಿನ್ನಲ್ಲಿ ವಾದವೇ ಬೇಡ. ನಾನು ಕರ್ಣನಿಗೆ ಸಾರಥಿಯಾಗಬೇಕಷ್ಟೇ? ಅಷ್ಟು ಮಾತ್ರಕ್ಕೆ, ಅವನು ನನ್ನನ್ನು ತನ್ನ ಆಳೆಂದು ತಿಳಿಯಕೂಡದು; ಇಷ್ಟೇ ಅಲ್ಲ, ಶ್ರೀಕೃಷ್ಣ ಸಾರಥಿಯ ಮಾತಿಗೆ ಅರ್ಜುನ ಮನ್ನಣೆ ಕೊಡುವಂತೆ, ಕರ್ಣನೂ ನನ್ನ ಸೂಚನೆಯನ್ನು ಶಿರಸಾವಹಿಸಬೇಕು.

**ಕೌರವ :** ಸೂಕ್ತ ಸೂಚನೆಯನ್ನು ಮನ್ನಿಸದಿರುವಷ್ಟು ಮೂರ್ಖನಿಲ್ಲ ಕರ್ಣ. ಒಳ್ಳೆಯದು, ಆ ವಿಷಯವನ್ನು ಆತನಿಗೆ ತಿಳಿಸುವೆ. ನೀವು ಮಾತ್ರ ನಾಳೆ ಬೆಳಗಿಗೇ ಸಾರಥ್ಯಕ್ಕೆ ಸಿದ್ಧರಿರಬೇಕು.

**ಶಲ್ಯರಾಜ :** ನಾಳೆ ಬೆಳಗಿಗೆ! ಅಪಮಾನದ ಅಗ್ನಿಯ ಚೆಂಡಿನಂತೆ ಸಾಗಿಬರುವ ಸೂರ್ಯನನ್ನು ಕಾಣುವವರೆಗೆ, ಈ ಶಲ್ಯರಾಜ ಜೀವಂತವಿರಬೇಕು; ಅಷ್ಟೇ.

**ಕೌರವ :** ಈ ನಿರಾಶೆಯ ನುಡಿಗಳು ಬೇಡ. ಮುಂದಾಳುಗಳನ್ನು ಮುಂದೆ ಮಾಡಿ ಹಿಂದಾಳುಗಳು ಹಿಂದಿನಿಂದ ಅವನ ಕತ್ತನ್ನು ಕತ್ತರಿಸುವಂತಹ ಕುತ್ಸಿತ ಕಾರಣವಿಲ್ಲ. ಸೇನಾಪತಿಯ ಬೆನ್ನು ಚಪ್ಪರಿಸಿ ಭಾಪು ಎನ್ನೋಣ. ವಿಜಯಲಕ್ಷ್ಮಿ ಕರ್ಣನ ಕೊರಳಿಗೆ ಮಾಲೆಯನ್ನು ಮುಡಿಸಲೇ ಬೇಕು.

**ಶಲ್ಯರಾಜ :** ಮನಸಿನ ಮಂಡಿಗೆ! ಜಗತ್ತಿನ ಜನ್ಮಕುಂಡಲಿಯೇ ಇದಕ್ಕೆ ಉತ್ತರವನ್ನು ಹೇಳಬೇಕು.

**ಕೌರವ :** ಆ ಹೇಡಿ ದೈವವನ್ನು ಬೆನ್ನಟ್ಟಬೇಡ. ಕಡುಗಲಿಗಳ ಕೈಯ್ಯಲ್ಲಿಯ ಖಡ್ಗವೇ ಜಗತ್ತಿನ ಭಾಗ್ಯವನ್ನು ಬರೆಯುವ ಲೆಕ್ಕಣಿಕೆ. ಶಲ್ಯರಾಜಾ, ನಾಳೆ ಬೆಳಗಿಗೇ ತಾವು ಸಿದ್ಧರಾಗಿ ಬರಬೇಕು ಸಾರಥ್ಯಕ್ಕೆ. ತಾವಿನ್ನು ಹೊರಡಬಹುದು. ( ಶಲ್ಯರಾಜ ಹೋಗುವನು )

## ೩ನೆಯ ಕೇಳಿಕೆ

**ನಿವೇದಕ :** ಕುರುಕ್ಷೇತ್ರ ರಣಾಂಗಣದಲ್ಲಿ ಹೋರಾಟದ ಹುಯಿಲು ಗಹಳೆ ಹಿಡಿದಿದೆ. ರಣವಾದ್ಯಗಳು ಮೊಳಗುತಿವೆ. ಕರ್ಣ ಶಲ್ಯರಾಜರು ಯುದ್ಧಕ್ಕೆ ಸಾಗುವ ಸಿದ್ಧತೆಯಲ್ಲಿ ನಿಂತಿದ್ದಾರೆ.

**ಕರ್ಣ :** ಶಲ್ಯರಾಜಾ, ತಾವಿನ್ನು ರಥವನ್ನು ಏರಬಹುದಲ್ಲವೇ?

**ಶಲ್ಯರಾಜ :** ಅರ್ಜುನನ ಆಗಮನವಾಗಲಿ ಕರ್ಣಾ.

ಕರ್ಣ ಕಾದಾಡುವ ಕುತೂಹಲವಿದ್ದಮೇಲೆ ಹಗೆಯನ್ನು ಹುಡುಕಿ ಕೊಂಡೇ ಹೋಗಬೇಕು.

**ಶಲ್ಯರಾಜ :** ಸಾಯುವದಕ್ಕೆ ಗಡಬಿಡಿಯನ್ನೇಕೆ ಮಾಡುವೆ? ಈಗ ನಿನಗೆ ಬದುಕುವುದಕ್ಕೆ ಸಿಕ್ಕುವ ನಿಮಿಷ ನಿಮಿಷಕ್ಕೂ ಬಹಳ ಬೆಲೆಯಿದೆ ಕರ್ಣಾSS!

**ಕರ್ಣ :** ಶತ್ರುಗಳ ಶಿರಗಳನ್ನು ಕತ್ತರಿಸುವುದಕ್ಕೆ ಕಾಲಿಡುವ ಮುನ್ನ ಸ್ವಂತದ ಶಿರವನ್ನು ಅಂಗೈಯಲ್ಲಿಟ್ಟುಕೊಂಡೇ ಸಮರಕ್ಕೆ ಸಾಗಬೇಕೆಂಬ ಸಿದ್ಧಾಂತವನ್ನು ಈ ಕರ್ಣ ಕೂಸಿರುವಾಗಲೇ ಕಲಿತಿದ್ದಾನೆ. ಹಂದೆಯಂತೆ ಹರಣವನ್ನುಳಿಸಿಕೊಳ್ಳುವ ಹೇಡಿತನವನ್ನು ಜೀವಗಳ್ಳ ಸಾರಥಿಯೇ ಸೂಚಿಸಬೇಕು; ಅಷ್ಟೇ.

**ಶಲ್ಯರಾಜ :** ಸೂತ ಪುತ್ರಾ.......!

**ಕರ್ಣ :** ಕ್ಷತ್ರಿಯ ಕುನ್ನಿSS!

ಶಲ್ಯರಾಜ : ಯಾರು ಕ್ಷತ್ರಿಯಃ ಕುನ್ನಿ?

ಕರ್ಣ : ಶೂರರಿಗೆ ಭಯವನ್ನು ತೋರುವ ಯಾವ ಕ್ಷತ್ರಿಯಾಧಮ ನಾದರೂ ಸರಿಯೇ.

ಶಲ್ಯರಾಜ ಕರ್ಣಾ, ಕೌರವನ ಅಭಿಮಾನಕ್ಕೆ ಕಟ್ಟುಬಿದ್ದು ನಾನೀಗ ನಿನ್ನ ಸಾರಥಿಯಾಗಿರುವೆನೆಂಬುದರ ಅರಿವಿರಲಿ. ಈ ಕ್ಷಾತ್ರ ಕುಲ ಸಂಪನ್ನನಲ್ಲಿ ಕಾದಾಡುವ ಕೆಚ್ಚಿಗೇನೂ ಕಡಿಮೆಯಿಲ್ಲ.

ಕರ್ಣ : ಕ್ಷಾತ್ರ ಕುಲದ ಕೆಚ್ಚು, ಬರಿಯ ಬಾಯಿಬಡಾಯಿ ಯಲ್ಲಿಲ್ಲ; ಬಾಹುಬಲದಲ್ಲಿದೆ. ಮರಣದೇವತೆಯನ್ನು ಬೆನ್ನಿಗೆ ಕಟ್ಟಿಕೊಂಡೇ ರಣದೇವತೆಯ ದರ್ಶನಕ್ಕೆ ಹೊರಟಿರುವೆ! ಅನ್ನದ ರಿಣಕ್ಕಾಗಿ ಪಂಚಪ್ರಾಣ ಗಳನ್ನೂ ಒರೆಗೆ ಹಚ್ಚಿರುವೆ! ಶಲ್ಯರಾಜಾ, ಕರ್ಣ ಕ್ಷಾತ್ರಕುಲಸಂಪನ್ನ ನೆಂಬುದನ್ನು ಇಂದು ಸಂಗ್ರಾಮದಲ್ಲಿಯೇ ಸಿದ್ಧಮಾಡಿ ಕೊಡುವೆ.

( ತೆರೆಯಲ್ಲಿ—ಎಲೇ ಎಲೇ ದುಃಶಾಸನ ನರಪಶುವೇ. ಏತಕ್ಕೆ ವೃಥಾ ಅಂಜಿ ಓಡಿ ಹೋಗುವೆ? ನೀನು ನಿನ್ನ ತಾಯಿಯ ಬಸಿರನ್ನು ಹೊಕ್ಕರೂ ಅದನ್ನು ಬಗೆದು ನಿನ್ನನ್ನು ಬೈಲಿಗೆಳೆದು ತರುವೆ. ಪಾಂಡವರ ಪತ್ನಿಯನ್ನು ಎಳೆದು ತಂದು ತುಂಬಿದ ಸಭೆಯಲ್ಲಿ ಅವಳ ಸೀರೆಯನ್ನು ಸೆಳೆದೆಯಲ್ಲವೇ ಅಧಮಾ! ಅದಕ್ಕೆ ಪ್ರತಿಯಾಗಿ ನಿನ್ನ ಪ್ರಾಣಗಳನ್ನು ಹೀರದೇ ಬಿಡುವೆನೇ? ಎಲೆ ಎಲೇ ಕರ್ಣಾದಿ ಕಡುಗಲಿಗಳೇ, ಹೆತ್ತತಾಯಿಯ ಹಾಲನ್ನು ಕುಡಿದ ಅಭಿಮಾನ ನಿಮಗಿದ್ದರೆ ಈ ನೀಚನನ್ನು ಉಳಿಸಿಕೊಳ್ಳಬನ್ನಿರಿ...... )

ಕರ್ಣ : ಮೋಸವಾಯಿತು ಶಲ್ಯರಾಜಾ. ದುಃಶಾಸನನನ್ನು ಬೆನ್ನಟ್ಟಿ ಬರುತ್ತಿದ್ದಾನೆ-ಭೀಮ. ಅಯ್ಯೋ, ಸಮೀಪಿಸಿಯೇ ಬಿಟ್ಟನಲ್ಲ ! ರಾಜಾ ! ನಾನೇನಾದರೂ ನಿನಗೆ ಕಟುವಾಡಿದ್ದರೆ ಕ್ಷಮಿಸು. ಬೇಗನೇ ರಥವನ್ನು ಅಲ್ಲಿಗೆ ಹಾರಿಸು.

ಶಲ್ಯರಾಜ : ಬೇಡ ಬೇಡ. ಭೀಮನಿಗೆ ಈಗ ರೌದ್ರಾವತಾರ ಬಂದಿದೆ. ಪ್ರತ್ಯಕ್ಷ ಕೃತಾಂತನೂ ಅವನಿದಿರಿಗೆ ನಿಲ್ಲಲಾರ. ದುಃಶಾಸನನ ಆಯುಷ್ಯ ಮುಗಿಯಿತು.

**ಕರ್ಣ** : ಇಲ್ಲ, ಇಲ್ಲ; ಅವನನ್ನು ಉಳಿಸಲು ಇನ್ನೂ ಅವಕಾಶವಿದೆ. ಹುಂ. ಜಗ್ಗು ಕಡಿವಾಣಗಳನ್ನು. ಅಯ್ಯೋ ! ಭೀಮ ದುಃಶಾಸನನನ್ನು ಹಿಡಿದೇ ಬಿಟ್ಟನಲ್ಲ ! ಹ್ಞಂ ! ರಾಜಾ, ತಡಮಾಡಬೇಡ. ಎಲ್ಲಿ, ಎಲ್ಲಿ ಕುದುರೆಯ ಕಡಿವಾಣಗಳು? ಹುಟ್ಟಂ, ಹೊಡೆ ರಥವನ್ನು. ಇದೋ, ಇಲ್ಲಿಂದಲೇ ಬಾಣವನ್ನು ಬಿಡುವೆ. (ಬಾಣ ಮತ್ತು ರಥಗಳ ಸಪ್ಪಳುಗಳು) ಬೆದರಬೇಡ ದುಃಶಾಸನಾ, ಈ ಕರ್ಣ ಬೆಂಬಲಕ್ಕೆ ಬರುವ. ನಡೆ ರಾಜಾ. (ಹೋಗುವರು)

(ಧ್ವನಿಪರಿಣಾಮ-ಭಯ-ಅತುರ ಸೂಚಕ ವಾದ್ಯ ಧ್ವನಿ-ಕ್ರಮೇಣ ಕಡಿಮೆಯಾಗುವುದು)

**ಕೃಷ್ಣ** : ಅರ್ಜುನಾ, ಈಗಲೀಗ ಇಲ್ಲಿದ್ದ ಕರ್ಣ ಮಿಂಚಿನ ವೇಗದಿಂದ ಮಾಯವಾದನಲ್ಲ. ಎಲ್ಲಿ ಹೋಗಿರಬಹುದು ಅವನು?

**ಅರ್ಜುನ** : ಕೃಷ್ಣಾ, ಅವನೆಲ್ಲಿಗೆ ಹೋದರೇನಾಯಿತು? ಎಲ್ಲಿದ್ದರೂ ಅವನು ಸುಖದಿಂದ ಇದ್ದರೆ ಸಾಕು.

**ಕೃಷ್ಣ** : ಇದೇನು ಅರ್ಜುನಾ, ಕರ್ಣನನ್ನು ಕೊಲ್ಲಲು ಹೊರಟವನಲ್ಲವೆ ನೀನು?

**ಅರ್ಜುನ** : ಇರಬಹುದು ಕೃಷ್ಣಾ; ಆದರೆ ಅವನಿಗಾಗಿ ಏಕೋ ಮನಸ್ಸು ಮರಗುತ್ತಲಿದೆ. ಇಂದಿಲ್ಲದಿದ್ದರೂ ಹಿಂದಿನ ಜನ್ಮದಲ್ಲಾದರೂ ಅವನು ನಮ್ಮ ಬಂಧುವಾಗಿರಲೇಬೇಕೆಂದು ಮನಸ್ಸು ಸಾಕ್ಷ್ಯ ಕೊಡುತ್ತಿದೆ. ಹೇಳು, ಹೇಳು ದೇವಾ, ನಿನಗೆ ಎಲ್ಲವೂ ಗೊತ್ತು. ಆ ಕರ್ಣ ಯಾರೆಂಬುದನ್ನು ಹೇಳಲಾರೆಯಾ?

**ಕೃಷ್ಣ** ಅರ್ಜುನಾ, ಈ ಸಹೋದರತನದ ಸೋಗನ್ನು ಮುಂದೆ ಮಾಡುವುದಕ್ಕಿಂತ ಕರ್ಣನ ಪರಾಕ್ರಮಕ್ಕೆ ಹೆದರಿರುವೆಯೆಂದು ಮೊದಲೇ ಹೇಳಿದ್ದರೆ, ಹಿಂದಿರುಗಿಸುತ್ತಿದ್ದೆನಲ್ಲ ರಥವನ್ನು.

**ಅರ್ಜುನ** : ಕೃಷ್ಣಾ, ಈ ಫಲ್ಗುಣನ ಪರಾಕ್ರಮದ ಬಗೆಗೆ ಸಂಶಯವಿದೆಯೇ?

ಕೃಷ್ಣ : ಈ ವರೆಗೆ ಸಂಶಯವಿರಲಿಲ್ಲ. ಈಗಲೀಗ ನಿನ್ನ ಮಾತು ಸಂಶಯವನ್ನು ಹುಟ್ಟಿಸುತ್ತಿದೆ. ಕಡುಗಲಿಯಾದವರು ಕದನಕ್ಕೆ ಕಾಲು ಕೆದರುವರೆಂಬುದನ್ನು ಮಾತ್ರ ಕೇಳಿ ಬಲ್ಲೆ.

**ಅರ್ಜುನ :** ಕೃಷ್ಣಾ! ಕುರುಕ್ಷೇತ್ರದಲ್ಲಿ ಕಾಲಿಟ್ಟ ಮೇಲೆ ಈ ಕಿರೀಟಿಯ ಕಾರ್ಮುಕ ಕೌಶಲವನ್ನು ಕಣ್ಣಾರೆ ಕಂಡಿಲ್ಲವೇ ನೀನು? ಕೌರವ ಪಕ್ಷೀಯರಿಗೆ ಕೊನೆಗಾಲವನ್ನು ಕಾಣಿಸಿದ ಕಡುಗಲಿ ಯಾರು? ಆಚಾರ್ಯ ಭೀಷ್ಮರನ್ನು ಶರಪಂಜರದ ಮೇಲೆ ಮಲಗಿಸಿದೆ......

ಕೃಷ್ಣ : ಶಿಖಂಡಿಯ ಸೋಗನ್ನು ಮುಂದೆ ಮಾಡಿ......

**ಅರ್ಜುನ :** ದ್ರೋಣಾಚಾರ್ಯರ ದೇಹವನ್ನು ಬಿಡಿಸಿದೆ......

ಕೃಷ್ಣ : ಅವನಿಗೆ ಮಗನ ಮರಣದ ಮಾತುಗಳಿಂದ ಮತಿಗೆ ಮಂಕು ಹಿಡಿದಿರುವಾಗ......

**ಅರ್ಜುನ :** ಸೈಂಧವನ ಶಿರವನ್ನು ಹಾರಿಸಿದೆ.......

ಕೃಷ್ಣ : ಅವನಾಗಿ ನಿನ್ನಿದಿರಿಗೆ ಬಂದು ನಿಃಶಸ್ತ್ರನಾಗಿ ನಗುತ್ತ ನಿಂತಿರುವಾಗ......

**ಅರ್ಜುನ :** ವೃಷಸೇನನನ್ನು ರಸಾತಳಕ್ಕಿಳಿಸಿದೆ.......

ಕೃಷ್ಣ : ಅವನು ನಿನಗೆ ವಯಸ್ಸಿನಲ್ಲಿ ಸರಿಸಮಾನನಲ್ಲದಿದ್ದರೂ...

**ಅರ್ಜುನ :** ಇದೇನು ದೇವಾ, ಹೇಳಿದ್ದನ್ನೆಲ್ಲ ಹೀಗಳೆಯುತ್ತಲೇ ಹೊರಟೆಯಲ್ಲ! ಈ ಕಡುಗಲಿ ಗಾಂಡೀವಿಯ ಗಂಡುಗಾಡಿ ಗುರುತಿಲ್ಲವೇ ನಿನಗೆ?

ಕೃಷ್ಣ : ಅದನ್ನೇನೋ ಅರಿತಿರುವೆ. ಆದರೆ ಹುಣ್ಣು ಮಾಯ್ದರೂ ಕಲೆ ಉಳಿಯುವಂತೆ, ನೀನೀಗ ಬೃಹನ್ನಳಿಯ ವೇಷವನ್ನು ಬಿಟ್ಟಿದ್ದರೂ, ಆ ಕಾಮಿನಿಯರ ಕೋಮಲತೆ ಕದನ ಭೂಮಿಯಲ್ಲಿಯೂ ಕಾಡುವಂತೆ ಕಾಣುತ್ತಿದೆ.

**ಅರ್ಜುನ :** ನಿಜವನ್ನು ಹೇಳು ಕೃಷ್ಣಾ, ಆ ಕರ್ಣ ನಮಗೆ ಬಂಧುವಾಗಿಲ್ಲವೇ?

ಕೃಷ್ಣ : ನನಗೆ ತಿಳಿದಮಟ್ಟಿಗೆ, ನೀವು ಚಂದ್ರವಂಶದವರು, ಅವನು ಸೂತ ವಂಶದವನು. ಅಥವಾ ಹಿಂದಿನ ಜನ್ಮದ ಸಂಬಂಧವಿದ್ದರೂ ರಣ-ಭೂಮಿಯಲ್ಲಿ ರಕ್ತಸಂಬಂಧದ ಮಾತುಗಳಿಗೆ ಅವಕಾಶವಿಲ್ಲ.

**ಅರ್ಜುನ :** ಆದರೆ ನಮ್ಮ ವೈರವಿರುವದು ಕೌರವನ ಕೂಡ; ಕರ್ಣನ ಸಂಗಡ ಕದನಕ್ಕೆ ಕಾರಣವಿಲ್ಲವಲ್ಲ!

ಕೃಷ್ಣ : ಅರ್ಜುನಾ, ಇದೇ ನಿನ್ನ ತಪ್ಪು ತಿಳುವಳಿಕೆ. ಅನ್ಯಾಯದ ಆಳಿಕೆಯನ್ನು ಆ ಚಂದ್ರಾರ್ಕ ಉಳಿಸಬೇಕೆನ್ನುವ ಯಾವನೇ ಆದರೂ ಅವನನ್ನು ಕೌರವನೆಂದೇ ತಿಳಿಯಬೇಕು. ಅಂತಹನಿಗೆ ಕೊನೆಗಾಲವನ್ನು ಕಾಣಿಸಿಯೇ ಬಿಡಬೇಕು.

**ಅರ್ಜುನ :** ಕರ್ಣನೇನು ಅಪರಾಧವನ್ನು ಮಾಡದೆ ಇದ್ದರೂ ?

**ಕೃಷ್ಣ** : ಅದೇಕೆ ಮಾಡಿಲ್ಲ? ಜೂಜಿನಾಟದಲ್ಲಿ ಮೋಸಗಾರಿಕೆಯನ್ನು ಮಾಡಿಲ್ಲವೇ ? ದ್ರೌಪದಿಯ ಸೀರೆಯನ್ನು ಸೆಳೆಯುತ್ತಿದ್ದಾಗ ಇವನೂ ಗಹಗಹಿಸಿ ನಗಲಿಲ್ಲವೇ ? ಆ ಚಕ್ರವ್ಯೂಹದಲ್ಲಿ ಕುಮಾರ ಅಭಿಮನ್ಯುವನ್ನು ಕಪಟದಿಂದ ಕೊಲ್ಲಲಿಲ್ಲವೇ? ಕೌರವನ ಕುಹಕಗಳಿಗೆಲ್ಲ ಕರ್ಣನ ಬೆಂಬಲ...

**ಅರ್ಜುನ :** ಸಾಕು, ಸಾಕು; ಕೃಷ್ಣಾ, ಕಣ್ಣುಗಳು ನಿಚ್ಚಳವಾದುವು! ನೋಡು, ನೋಡು ! ಮಗನ ಮರಣದ ಮುಯ್ಯವನ್ನು ತೀರಿಸದೆ ಶಸ್ತ್ರಾಸ್ತ್ರಗಳನ್ನು ಒರೆಗಾಣಿಸುವುದಿಲ್ಲ. ಎಲೆ ಎಲೇ ಕರ್ಣಾ, ನೀನು ನನ್ನ ಮಗನನ್ನು ಮುಚ್ಚುಮರೆಯಿಂದ ಕೊಂದೆ. ಅದರ ಸೇಡಿಗಾಗಿ ನಾನು ನಿನ್ನ ಮಗನನ್ನು ನಿನ್ನ ಕಣ್ಣೆದಿರಿಗೇ ಕೊಂದಿರುವೆ. ಮಗನ ಮೋಹ ನಿನಗಿದ್ದರೆ–ಎಲ್ಲಿರುವೆ ? ಬಾ ಬಯಲಿಗೆ. ಅಂದು ಕಪಟವನ್ನರಿಯದ ಧರ್ಮರಾಜನೊಡನೆ ಜೂಜಿನಾಟವಾಡಿ ಗೆದ್ದಿರಿ. ಇಂದು ಈ ಜಗಜಟ್ಟಿಯೊಡನೆ ಜೀವ, ಸಾವುಗಳ ಜೂಜಿನಾಟದ ಜಟ್ಟಿತನವನ್ನು ತೋರುಬಾ. ಎಲ್ಲಿರುವಿ ಹೇಡಿ.

**ಕೃಷ್ಣ** : ಕಾರಣವಿಲ್ಲದೆ ಕೂಗಿಕೊಳ್ಳುವೆಯೇಕೆ ? ಕಾದಾಡುವುದಕ್ಕೆ ನಿನ್ನ ಸಿದ್ಧತೆಯೇ ಇದ್ದರೆ ಕರ್ಣನಿದ್ದಲ್ಲಿಗೇ ನಿನ್ನ ರಥವನ್ನು ಹಾರಿಸುವೆ. ಭೀಮನ ಕೈಯಲ್ಲಿ ಸಿಕ್ಕ ದುಃಶಾಸನನನ್ನು ಬಿಡಿಸುವುದಕ್ಕೆ ಹೋಗಿದ್ದಾನೆ ಅವನು. ಅಲ್ಲಿಗೇ ಹೋಗೋಣವೇ ?

**ಧರ್ಮರಾಜ :** (ಒಮ್ಮೆಲೇ ಬಂದು) ಎಲ್ಲಿಗೆ ಹೋಗುವುದೂ ಬೇಡ. ಈ ಯುದ್ಧವೇ ಸಾಕು.

**ಕೃಷ್ಣ :** ಯಾರು ? ಧರ್ಮರಾಜಾ, ಇದೇನು ಹೇಳುತ್ತಿರುವೆ ?

**ಧರ್ಮರಾಜ :** ನಿಜವಾದುದನ್ನೇ ಹೇಳುತ್ತಿರುವೆ. ಕೌರವನ ಕೂಡ ಕಾದಾಡುವುದು ಸಾಧ್ಯವಿಲ್ಲವೆಂದು ನನಗೆ ಮೊದಲೇ ತಿಳಿದಿತ್ತು. ಇನ್ನಾದರೂ ನಿಲ್ಲಿಸಿರಿ, ಯುದ್ಧವನ್ನು. ಸುಯೋಧನನಿಗೆ ಶರಣಾಗತರಾಗಿ ಭೂಮಿಯ ರಿಣವನ್ನು ಉಳಿಸಿಕೊಳ್ಳಿರಿ. ನಾನು ನಿಃಶ್ಚಿಂತತೆಯಿಂದ ತಪಸ್ಸಿಗೆ ತೆರಳುವೆ.

**ಕೃಷ್ಣ :** ಇದೇನು ಧರ್ಮಭೂಪಾಲಾ, ಸಮರಭೂಮಿಗೆ ಸಲ್ಲದ ಮಾತುಗಳು ?

**ಧರ್ಮರಾಜ :** ಶೂರರಾದವರಿಗೆ ಸಮರ ಭೂಮಿಯ ಹಂಬಲ ! ನಮ್ಮಂಥ ಪಿಂಡಗಳ್ಳರಿಗೆ ಪರಾಕ್ರಮದ ಮಾತುಗಳೇಕೆ ? ಕರ್ಣನ ಕೈಯ್ಯಲ್ಲಿ ಸಿಕ್ಕು ಕಾಲನ ಮನೆಯ ಹಾದಿಯನ್ನೇ ಹಿಡಿದಿದ್ದೆ. ಆದಾರದೋ ಕಟ್ಟಪ್ಪಣೆಗೆ ಕಟ್ಟುಬಿದ್ದು ನನಗೆ ಜೀವದಾನವನ್ನು ಕೊಟ್ಟ. ನಕುಲ ಸಹದೇವರೂ ಅವನ ಬಾಣಗಳಿಗೆ ಬಲಿಯಾಗುತ್ತಿದ್ದರು. ಅವರ ಸೋದರ ಮಾವ ಶಲ್ಯ ರಾಜನಿದ್ದನೆಂದು ಅವರೂ ಪ್ರಾಣದಿಂದ ಪಾರಾದರು ! ಇಷ್ಟಾದರೂ ಈ ಭಾವ ಮೈದುನರ ಮೆರವಣಿಗೆ ಮಾತ್ರ ರಥದಲ್ಲಿಯೇ ಸಾಗುತ್ತಲಿದೆ.

**ಅರ್ಜುನ :** ಈ ಚುಚ್ಚು ಮಾತುಗಳೇಕೆ ಅಗ್ರಜಾ ? ಕರ್ಣ ಕಣ್ಣಿದಿರಿಗೆ ಕಾಣಲಿ...

**ಧರ್ಮರಾಜ :** ಕಂಡರೇನಾಗುವುದು ? ಶಲ್ಯ ಸಾರಥಿಯಾಗಿರುವವರೆಗೆ ಕರ್ಣನಿಗೆ ಕೊನೆಗಾಲವೇ ಇಲ್ಲ.

**ಕೃಷ್ಣ :** ಧರ್ಮರಾಜಾ, ನಿನ್ನ ಮಾತು ಸುಳ್ಳಲ್ಲ. ಆದರೆ ಕೌರವ ಪಕ್ಷದವರ ಒಳಜಗಳಗಳೇ ಅವರ ನಾಶಕ್ಕೆ ಕಾರಣವಾಗಿವೆ. ಶಲ್ಯರಾಜ ಮನಸ್ಸಿಲ್ಲದೆ ಸಾರಥಿಯಾಗಿದ್ದಾನೆ. ಅಲ್ಪಾವಧಿಯಲ್ಲಿಯೇ ಅವರಲ್ಲಿ ಒಡಕು ಹುಟ್ಟಲೇ ಬೇಕು. ಅದರ ಅನುಭವವನ್ನು ನೀವೇ ನೋಡುವಿರಂತೆ. ಅದೋ, ಕೇಳಿರಿ, ಸಪ್ಪಳುವನ್ನು. ಕರ್ಣನ ರಥ ಇತ್ತಲೇ ಬರುತ್ತಿದೆ. ಸಿದ್ಧನಾಗಿರು ಅರ್ಜುನಾ. ಅದೋ ಬಂದೇ ಬಿಟ್ಟ.

**ಕರ್ಣ** : (ರಥದಿಂದಿಳಿದು) ಎಲೇ, ಪಾಂಡವ ಕುನ್ನಿಯೇ, ನಾಯಾಸವಾಗಿಯೇ ಸಿಕ್ಕೆಯಲ್ಲ. ದುಃಶಾಸನನ ಎದೆಯನ್ನು ಸೀಳಿದ ಆ ತೋಳ ತಪ್ಪಿಸಿಕೊಂಡು ಹೋಯಿತು. ಅವಕ್ಕೆ ಬದಲು ನರಿಕುನ್ನಿ ಇದಿರಾಯಿತು. ಅಡ್ಡಿಯಿಲ್ಲ.

**ಅರ್ಜುನ** : ಥೂ ಹೇಡೀಽಽ ! ದುಃಶಾಸನನ ದುರಂತಕ್ಕಾಗಿ ಅಷ್ಟೊಂದು ಉರಿದೇಳುವ ನೀನು ನಿಜವಾಗಿಯೂ ಕ್ಷತ್ರಿಯನಾಗಿದ್ದರೆ, ನಿನ್ನ ಮಗನ ಮರಣಕ್ಕೆ ಕಾರಣನಾದ ಈ ಕಡುಗಲಿಯೊಡನೆ ಕಾದಾಡು.

**ಕರ್ಣ** : ಸಾರಥಿಯ ಬಲದಿಂದ ಬೀಗಿರುವ ಹೆಂಬೇಡಿ! ನೀನಾವ ಕಡುಗಲಿಯೋ ? ಹೆಣ್ಣಲ್ಲ, ಗಂಡಲ್ಲ ! ಕೃಷ್ಣನ ಕೈಚಳಕವಿಲ್ಲದಿದ್ದರೆ ಪಾಂಡವರ ರಕ್ತಮಾಂಸಗಳನ್ನು ಸೇವಿಸುವುದಕ್ಕೆ ಹದ್ದು ಕಾಗೆಗಳಿಗೆ ಆಮಂತ್ರಣವನ್ನು ಕೊಟ್ಟು ಯಾವುದೋ ಕಾಲವಾಗುತ್ತಿತ್ತು.

**ಅರ್ಜುನ** : ಪಾಪೀ, ನಮ್ಮ ಮೇಲೆ ಕೋಪವಿರಬೇಕಾದದ್ದು ಆ ದುಷ್ಟ ದುರ್ಯೋಧನನಿಗೆ! ಹೊಟ್ಟೆಯ ಪಾಡಿಗಾಗಿ ಅವನ ತಂಬುಲಕ್ಕೆ ಕೈಯೊಡ್ಡಿದ ನಿನಗೇಕೆ ನಮ್ಮ ಮೇಲೆ ಆಕ್ರೋಶ ?

**ಕರ್ಣ** : ಅಯ್ವರಿಗೆ ಅಯ್ದು ಹಳ್ಳಿಗಳನ್ನು— ಕಡೆಗೆ ಒಂದು ಹಳ್ಳಿಯನ್ನಾದರೂ—ಕೊಡು ಎಂದು ಕೌರವೇಶ್ವರನಿದಿರಿಗೆ ಕೈಜೋಳಿಗೆಯನ್ನೊಡ್ಡಿದ ತಂಬುಲಗಳ್ಳರು ಯಾರು, ಎಂಬುದನ್ನು ಜಗತ್ತೇ ಅರಿತಿದೆ. ಇಂತಹ ನಾಯಿಗಳ ನಿಯಂತ್ರಣಕ್ಕೆ ಬಣ್ಣದ ಕೋಲು ಯಾಕೆ ? ಆತನ ಪ್ರತಿನಿಧಿಯಾಗಿ ನಾನೇ ಬಂದಿರುವೆ.

**ಅರ್ಜುನ** : ಈ ಮೂಲೋಕ ಮಹಾವೀರನ ಕೈಯಲ್ಲಿ ಸಿಕ್ಕಮೇಲೆ ತಿರುಗಿ ನಿನ್ನ ರಾಜ್ಯಕ್ಕೆ ಹೋಗಬಲ್ಲೆಯಾ ?

ಕರ್ಣ  ಇಂತಹ ವಿಷಮ ಸನ್ನಿವೇಶದಲ್ಲಿ ಸೇನಾಪತಿಯಾಗುವಾಗಲೇ ಅದೆಲ್ಲವನ್ನೂ ವಿಚಾರ ಮಾಡಿರುವೆ. ದೇಶಕೋಶಗಳ ಆಶೆಯನ್ನಿಟ್ಟುಕೊಂಡಿರುವವ ನೀನು. ಕರ್ಣ ಈ ವರೆಗೆ ಕೀರ್ತಿವಂತನಾಗಿ ಬಾಳಿರುವ; ಇನ್ನು ಮುಂದೆಯೂ ಕೀರ್ತಿ ಶರೀರನಾಗಬೇಕೆಂದೇ ಸಮರಕ್ಕೆ ಸಾಗಿರುವ.

**ಅರ್ಜುನ :** ಆ ನಿನ್ನ ಇಚ್ಛೆಯನ್ನು ಪೂರೈಸಲು ಈ ಕಿರೀಟಿ ಕಾಯ್ದು ನಿಂತಿರುವ.

**ಕರ್ಣ :** ಕಾದಾಡುವ ಕೆಚ್ಚು ಕಿರೀಟಿಯಲ್ಲಿದ್ದರೆ ರಾಜ್ಯಕ್ಕಾಗಿ ಬಿಕ್ಕೆಯ ಬೊಗಸೆಯನ್ನು ಒಡ್ಡುತ್ತಿರಲಿಲ್ಲ. ಅರ್ಜುನಾ, ಜೀವ ನಾವುಗಳು ಕಾಲಪುರುಷನ ಆಧೀನ. ಅದಕ್ಕೆ ಈ ರಣದೇವತೆ ಸಾಕ್ಷ್ಯವಾಗಲಿ. ಬಾಯ್ಮಾತಿನ ಬುರುಗಿನ ಬುರುಡೆಗಳನ್ನು ಸಾಕುಮಾಡು; ಬಾಹುಗಳಲ್ಲಿ ಬಲವಿದ್ದರೆ ಶಸ್ತ್ರಾಸ್ತ್ರಗಳಿಂದ ಸಿದ್ಧನಾಗು.

**ಅರ್ಜುನ :** ಕುದುರೆಯ ಕಡಿವಾಣವನ್ನು ಬಿಟ್ಟು ಕೈದುಗಳಿಗೆ ಕೈನೀಡುವ ಕೆಚ್ಚಿದೆಯೇ ಕುಲಹೀನ ಸೂತಪುತ್ರನಿಗೆ?

**ಕರ್ಣ :** ಸತ್ಕುಲದಲ್ಲಿ ಹುಟ್ಟುವದು ದೈವಾಧೀನವಾಗಿರಬಹುದು; ಆದರೆ ಅರ್ಜುನಾ, ನಾನು ಸೂತಪುತ್ರನಾಗಿದ್ದರೂ ಸ್ವತಃದ ಸತ್ವದ ಬಲ ದಿಂದ ಸಮ್ರಾಟರ ಮುಕುಟಗಳನ್ನು ಮಣಿಸಬಲ್ಲೆನೆಂಬುದನ್ನು ಈ ಜಗತ್ತೇ ಅರಿತಿದೆ; ಇನ್ನು ಮೇಲೆ ನೀನೂ ಅರಿಯುವೆ. ಬೇಕೆಂದರೆ ನನ್ನ ಗುರುವಿ ನಂತೆ ನಿಃಕ್ಷತ್ರಿಯ ಪೃಥ್ವಿಯನ್ನೂ ಮಾಡಬಲ್ಲೆನೆಂಬುದನ್ನು ಮರೆಯಬೇಡ.

**ಅರ್ಜುನ :** ಕೊಳಚೆಯೊಳಗಿನ ಕಪ್ಪೆ ಮಹಾಸಾಗರದ ಮೊಸಳೆ ಯೊಡನೆ ಮೇಲಾಟವಾಡಬಲ್ಲುದಂತೆ! ಹಃ ಹಃ ಹಃ!

**ಕರ್ಣ** ಅಜ್ಞಾನದ ಅತಿರೇಕ! ಆಡುವ ಮಾತಿನ ಅರ್ಥದ ಅರಿ ವಾಗಿಲ್ಲ. ನನಗೆ ಹೇಳಿದ ಮಾತನ್ನೇ ನಿನಗೂ ದುರ್ಯೋಧನನಿಗೂ ಹೋಲಿಸಿ ನೋಡು. ನನಗೆ ಕೊಳಚೆಯೊಳಗಿನ ಕಪ್ಪೆಯೆಂದೆಯಲ್ಲವೇ? ಅರ್ಜುನಾ, ಕಾಡಿನೊಳಗಿನ ಗಡ್ಡೆಗೆಣಸುಗಳನ್ನು ತಿಂದು ಕಂಡವರ ಕಟ್ಟೆಯ ಮೇಲೆ ಒರಗಿ, ಹೇಳುವದಕ್ಕೆ ಹೆಸರಿಲ್ಲದೆ ಮುಚ್ಚುಮರೆಯಲ್ಲಿ ದಾಸ್ಯದಿಂದ ಹೊಟ್ಟೆಹೊರೆದ ಪಾಂಡವರಿಗಿಂತಲೂ, ಕೊಳಚೆಯಲ್ಲಾದರೂ ಕೆಚ್ಚೆದೆ ಯಿಂದ ಕಿರಿಚುವ ಕಪ್ಪೆಯೇ ಶ್ರೇಷ್ಠವೆನ್ನಬೇಕಾಗುತ್ತದೆ.

**ಅರ್ಜುನ :** ಬಡಬಡಿಕೆ ಬಲವಾಯಿತು. ಕರ್ಣಾ, ಇಗೋ ಈ ಅಗ್ನ್ಯಸ್ತ್ರದಿಂದ ನಿನ್ನನ್ನು ಉರಿಸಿ ಬಿಡುವೆ. ಸಾವಧನಾಗು (ಬಾಣಪ್ರಯೋಗ)

**ಕರ್ಣ :** ಮೂರ್ಖಾ, ಅದುನೋಡು; ಈ ವಾರುಣಾಸ್ತ್ರದಿಂದ ಅರ್ಧ ದಾರಿಯಲ್ಲಿಯೇ ಅಡಗಿ ಹೋಯಿತು, ನಿನ್ನ ಅಗ್ನ್ಯಸ್ತ್ರ! ಇನ್ನು ಈ ಪ್ರಳಯ ಮೇಘವರ್ಷವನ್ನು ಹೇಗೆ ತಡೆಯುವಿಯೋ ನೋಡಿಕೊಳ್ಳು. ಗುಡುಗು ಸಿಡಿಲುಗಳ ಅಬ್ಬರಕ್ಕೆ ಅಂಜಿ ಎದೆಯೊಡೆಯಬೇಡ. (ಗುಡುಗು ಸಿಡಿಲುಗಳ ಬಾಣಪ್ರಯೋಗ)

**ಅರ್ಜುನ :** ಹಾಗಿದ್ದರೆ, ಈ ವಾಯ್ವಸ್ತ್ರದ ಪ್ರಭಾವವನ್ನು ನೋಡು. ( ಬಾಣಪ್ರಯೋಗ ) ಅದೋ, ಆ ನಿನ್ನ ಮೇಘಮಂಡಲಗಳು ಗಾಳಿಯಲ್ಲಿ ರವದೆಯಂತೆ ತೂರಿ ಹೋಗುತ್ತಿವೆ. ಇನ್ನು ಇಂದ್ರಾಸ್ತ್ರದ ಸಪಿನೋಡು. ( ಪ್ರಯೋಗ )

**ಕರ್ಣ** ಈ ಪರಶುರಾಮಾಸ್ತ್ರದಿಂದ ಅದನ್ನು ನಡುವೇ ಕತ್ತರಿಸಿರುವೆ. ಅರ್ಜುನಾ, ಇನ್ನು ನಿನ್ನ ತಂದೆ ಇಂದ್ರದೇವನನ್ನು ನೆನೆಸು; ನಿನ್ನ ಭೂಮಿಯ ರಿಣ ಮುಗಿಯಿತು! ಹುಂ, ಹೆಚ್ಚು ಹೊತ್ತು ಸಿಕ್ಕಲಾರದು. ಬೇಗನೇ ಭಗವಂತನ ನಾಮಸ್ಮರಣೆಮಾಡು. ಶಲ್ಯರಾಜಾ, ನೋಡುತ್ತಿರು, ಕ್ಷಣಾರ್ಧದಲ್ಲಿಯೇ ಪಾರ್ಥನನ್ನು ಪರಲೋಕಕ್ಕೆ ಕಳಿಸುವೆ.

**ಶಲ್ಯರಾಜ :** ಆದರೆ, ಕರ್ಣಾ, ಕತ್ತು ಕತ್ತರಿಸಬೇಕೆಂದು ಕಿರೀಟಕ್ಕೆ ಗುರಿಯಿಟ್ಟಿರುವೆಯಲ್ಲ? ಅರ್ಜುನನ ಕುತ್ತಿಗೆಗೆ ಗುರಿಯಿಡು.

**ಕರ್ಣ :** ಇಲ್ಲ, ಶಲ್ಯರಾಜಾ, ಅದು ಕೃಷ್ಣನ ಕಾರಸ್ಥಾನ. ನಾನು ಕುತ್ತಿಗೆಗೇ ಗುರಿಯಿಟ್ಟಿದ್ದೆ. ಕೃಷ್ಣ ರಥವನ್ನು ನೆಲದಲ್ಲಿ ಇಳಿಸಿದ್ದಾನೆ. ಅಡ್ಡಿಯಿಲ್ಲ ಮದ್ರರಾಜಾ; ಇಟ್ಟಗುರಿಯನ್ನು ಕಿತ್ತು ಗೊತ್ತಿಲ್ಲ ಈ ಕರ್ಣನಿಗೆ; ಅಲ್ಲದೆ, ಕ್ಷತ್ರಿಯನನ್ನು ಕೊಲ್ಲುವುದೆಂದರೆ ಅವನ ಕಿರೀಟವನ್ನು ಕತ್ತರಿಸುವುದು; ಅರಸೊತ್ತಿಗೆಯನ್ನು ಅಡಗಿಸುವುದು. ತನ್ನ ದುರವಸ್ಥೆಯನ್ನು ನೋಡಲು ಅವನು ಬದುಕಿರಲೇ ಬೇಕು.

**ಕೃಷ್ಣ :** ಭಾಪು, ಭಾಪು! ಕರ್ಣಾ, ನೀನು ನಿಜವಾಗಿಯೂ ಸೂತ ಪುತ್ರನಲ್ಲ; ನಿನ್ನ ವೀರವಾಣಿ ಕ್ಷಾತ್ರಕುಲಕ್ಕೆ ಆದರ್ಶವಾದೀತು.

**ಕರ್ಣ :** ಧನ್ಯನಾದೆ ಕೃಷ್ಣಾ! ಇನ್ನು ಮರಣವೂ ಮಹಾನವಮಿಯೇ ನನಗೆ! ಆದರೆ ಕೃಷ್ಣಾ, ಈ ಬಾಣದಿಂದ ನಿನ್ನ ಮೈದುನನಿಗೆ ಮರಣ

ನಿಶ್ಚಿತ. ಬೇಗನೆ ಕಾರ್ಯಸ್ಥಾನಕ್ಕೆ ಕೈಗೊಡು. (ಧ್ವನಿಪರಿಣಾಮ) ಮೆಚ್ಚಿದೆ, ಮೆಚ್ಚಿದೆ! ಯಾದವಾ, ರಥವನ್ನು ಅರ್ಧಕರ್ಧ ನೆಲದಲ್ಲಿ ತುಳಿದು ಬಿಟ್ಟೆಯಲ್ಲವೇ?

ಶಲ್ಯರಾಜ : ಆದರೇನಾಯಿತು, ಕರ್ಣಾ? ನನ್ನ ಮಾತನ್ನು ಕೇಳು; ಈ ಸರ್ಪಾಸ್ತ್ರದ ಗುರಿಯನ್ನು ಇನ್ನಿಷ್ಟು ತಗ್ಗಿಸು; ಅರ್ಜುನನ ಎದೆಗೆ ಗುರಿಯಿಡು. ರಥವನ್ನು ಮತ್ತೆಯೂ ತುಳಿದರೆ ಅನಾಯಾಸ ವಾಗಿಯೇ ಪಾರ್ಥನ ಕತ್ತು ಕತ್ತರಿಸಿ ಹೋಗುವದು; ಇಲ್ಲವಾದರೆ ಎದೆಯೇ ಇಬ್ಭಾಗವಾಗುವದು.

ಕರ್ಣ : ಇಲ್ಲ ಮದ್ರರಾಜಾ! ಕರ್ಣನ ಕೈಯಲ್ಲಿರುವುದು ಇದೊಂದೇ ಬಾಣವಲ್ಲ. ಆಯುಷ್ಯದ ಅಂಚಿನಲ್ಲಿರುವಾಗ ಅನತ್ಯವನ್ನು ಆಚರಿಸಲಾರೆ. ತಡಮಕೋ ಅರ್ಜುನಾ, ಬಿಟ್ಟೆ ಬಾಣವನ್ನು. (ಬಾಣಪ್ರಯೋಗ)

ಕೃಷ್ಣ : ಭಾಪು, ಭಾವು, ಕರ್ಣಾ! ನಿನ್ನ ಬಾಣಪ್ರಯೋಗವನ್ನು ಯಾರೂ ಹೊಗಳಬೇಕು.

ಕರ್ಣ : ಧನ್ಯನಾದೆ ಕೃಷ್ಣಾ! ಆದರೆ ಇದೇನು? ಬಿಟ್ಟಬಾಣ ಕೈಸೇರು ತ್ತಿದೆಯಲ್ಲ! ಇದೇನೀ ವಿಚಿತ್ರ ಶಲ್ಯರಾಜಾ?

ಶಲ್ಯರಾಜ : ಅದು ಬಾಣವಲ್ಲ; ಅರ್ಜುನನ ಕಡುವೈರಿಯಾದ ತಕ್ಷಕನೆಂಬ ಸರ್ಪ ನಿನ್ನ ಬತ್ತಳಿಕೆಯಲ್ಲಿ ಬಾಣದ ರೂಪದಿಂದ ಸೇರಿದ್ದ. ಗುರಿ ತಪ್ಪಿದ್ದರಿಂದ ನಿರಾಶನಾಗಿ ಮತ್ತೆ ನಿನ್ನ ಬಳಿಗೆ ಬಂದಿರುವ. ಇನ್ನೊಮ್ಮೆ ಅದೇ ಬಾಣವನ್ನು ಹೂಡು.

ಕರ್ಣ : ತೊಟ್ಟ ಬಾಣವನ್ನು ತೊಡದಿರುವುದು ಈ ಕರ್ಣನ ಜೀವ ದುಸಿರು. ತಿರುಗಿ ಹೋಗು ತಕ್ಷಕಾ; ನಿನ್ನ ಹಗೆತನವನ್ನು ಹೇಗಾದರೊಂದು ಹವಣಿಕೆಯಿಂದ ಹಿಂಗಿಸಿಕೊಳ್ಳು. ಈ ಕರ್ಣನಲ್ಲಿ ಮಾತ್ರ ಆಶ್ರಯ ಸಿಕ್ಕ ಲಾರದು.

ಶಲ್ಯರಾಜ : ನಿನ್ನ ದುರ್ದೈವ! ಅರ್ಜುನನ ಅಸುಗಳನ್ನು ಹೀರ ಬೇಕೆಂದು ತಕ್ಷಕ ಎಂದಿನಿಂದಲೋ ಕಾಯ್ದಿದ್ದ. ಆಯತ್ತ ವೇಳೆಯಲ್ಲಿ ಅನುಕೂಲವಾದುದನ್ನು ಕಳೆದುಕೊಂಡೆಯಲ್ಲೋ ದೈವಗೇಡೀ! ಸಾವು

ಸಮೀಪಿಸುತ್ತಿರುವಾಗ ಸಂಜೀವನವೇ ನಾಗಿ ಬಂದರೂ ಅದರ ಸದುಪ ಯೋಗ ಮಾಡಿಕೊಳ್ಳಬೇಕೆಂಬ ಸದ್ಬುದ್ಧಿ ಬರಬೇಕಲ್ಲ!

ಕರ್ಣ : ಈ ಕರ್ಣನಿಗಾಗಿ ಯಾರೂ ಪಶ್ಚಾತ್ತಾಪ ಪಡಬೇಕಾಗಿಲ್ಲ ಶಲ್ಯರಾಜಾ. ನೀನು ಸಾರಥ್ಯವನ್ನು ಸರಿಯಾಗಿ ನಾಗಿಸಿದರೆ ಸಾಕು. (ಕರುಣ ಭಯ ಮಿಶ್ರಿತವಾದ ಹಿನ್ನೆಲೆಯ ಸಂಗೀತ ಕ್ರಮಶಃ ಮಂದ ವಾಗುತ್ತಿದೆ) ಅಯ್ಯೋ, ಏನಿದು....? ನನ್ನ ಬಲವೆಲ್ಲ ಬಸವಳಿಯುತ್ತಿದೆ ಯಲ್ಲ ಶಲ್ಯರಾಜಾऽऽ! ಅಯ್ಯೋ, ಅಯ್ಯೋ! ರಥದ ಗಾಲಿ ತಂತಾನೆ ಭೂಮಿಯಲ್ಲಿ ಹೂಳುತ್ತದೆ! ಶಲ್ಯರಾಜಾ, ಶಲ್ಯರಾಜಾ, ಬೇಗನೇ ಇಳಿ; ಎತ್ತು ಗಾಲಿಯನ್ನು.

**ಶಲ್ಯರಾಜ :** ಅದು ನನ್ನ ಕೆಲಸವಲ್ಲ.

ಕರ್ಣ : ನೀನು ಸಾರಥಿಯಲ್ಲವೇ ?

**ಶಲ್ಯರಾಜ :** ಸೂತಪುತ್ರऽऽऽ !

ಕರ್ಣ : ಕೊನೆಗಾಲದಲ್ಲಿಯೂ ಸೂತಪುತ್ರ, ಸೂತಪುತ್ರ ! ಬಾರದುದನ್ನು ಕೇಳಿದೆ! ಗುರುವೇ ಪರಶುರಾಮಾ, ನಿನ್ನ ಶಾಪಸಂದೇಶ ಸಮರ ಭೂಮಿಯಲ್ಲಿ ಕಿವಿಗೆ ಬಿದ್ದಿತು! ಇನ್ನು ಕರ್ಣನಿಗೆ ಉಳಿಗಾಲವಿಲ್ಲ! ಸೂತಪುತ್ರ ! ನನ್ನ ಪ್ರಚಂಡ ಪೌರುಷದಿಂದ ಪೃಥ್ವಿಯನ್ನೇ ತಲೆಕೆಳಗು ಮಾಡಬಲ್ಲೆನಾದರೂ ಜಾತಿಜನ್ಮಗಳ ಕೀಳು ಮೇಲುಗಳು ಕಡಿಮೆಯಾಗಲಿಲ್ಲ, ಗುಣಕ್ಕೆ ಗೌರವ ಸಿಕ್ಕಲಿಲ್ಲ! ಇನ್ನು ಸೂತಪುತ್ರನಾಗಿಯೇ ಸಮರವನ್ನು ಸಾಗಿಸುವೆ. ಶಲ್ಯಾ, ಕೊಡು ಕುದುರೆಯ ಕಡಿವಾಣಗಳನ್ನು! (ತೆಗೆದು ಕೊಂಡು) ಈಗ ನಿಜವಾಗಿಯೂ ಸೂತನಾದೆ. ಒಂದು ಕೈಯಲ್ಲಿ ಕಡಿವಾಣ, ಮತ್ತೊಂದು ಕೈಯಲ್ಲಿ ಬಿಡುಬಾಣ. ಹಲ್ ಹಲ್ (ಕುದುರೆಗಳನ್ನು ಪ್ರಚೋದಿಸುವ) ಇಲ್ಲ, ಇಲ್ಲ. ಗಾಲಿ ಕೀಳಲೊಲ್ಲದು. ಭೂದೇವಿ ಬಾಯ್ಬಿಟ್ಟು ರಥವನ್ನು ನುಂಗುತಿದ್ದಾಳೆ. ಕೆಳಗಿಳಿದು ಎತ್ತುವೆ (ಕರ್ಣ ರಥದಿಂದ ಕೆಳ ಗಿಳಿಯುತ್ತಾನೆ).

ಕೃಷ್ಣ : ಅರ್ಜುನಾ, ಕರ್ಣ ರಥದಿಂದ ಕೆಳಗಿಳಿದಿದ್ದಾನೆ. ಇದೇ ಹೊತ್ತು. ಬಿಡು ಬಾಣಗಳನ್ನು; ಹಾರಿಸು ಅವನ ತಲೆಯನ್ನು.

ಕರ್ಣ : ಕೃಷ್ಣಾ, ಅವಸರವನ್ನೇಕೆ ಮಾಡುವೆ? ನಿನ್ನ ಕಾರಸ್ಥಾನದಲ್ಲಿ ಈ ಕರ್ಣನಿಗೆ ಕೊನೆಗಾಲ ಖಂಡಿತ; ಆದರೆ, ಸಮಸ್ತ ಪ್ರಪಂಚಕ್ಕೇ ನನ್ನ ಶಕ್ತಿ ಸಾಮರ್ಥ್ಯಗಳನ್ನು ತೋರಬೇಕೆಂದಿರುವೆ. ಕರ್ಣನ ಕೀರ್ತಿಯನ್ನು ಭಾರತಯುದ್ಧದಲ್ಲಿ ಬಂಗಾರದ ಅಕ್ಷರಗಳಿಂದ ಬರೆಸಬೇಕೆನ್ನುವೆ. ಅದಕ್ಕಾಗಿ ಧರ್ಮಯುದ್ಧ ಮಾಡು; ಅಧರ್ಮಕ್ಕೆ ಆಸ್ಪದ ಕೊಡಬೇಡ.

ಕೃಷ್ಣ ಕರ್ಣಾ, ಕೊನೆಗಾಲದಲ್ಲಿ ಧರ್ಮಾ-ಧರ್ಮಗಳ ನೆನಪಾಯಿತಲ್ಲವೇ? ಏನು ನೋಡುವೆ? ಅರ್ಜುನಾ, ಬಿಡು ಬಾಣಗಳನ್ನು; ಹಾರಿಸು ಅವನ ತಲೆಯನ್ನು.

ಕರ್ಣ : ತಡೆ ಅರ್ಜುನಾ, ನ್ನಲ್ಲಾದರೂ ನಿಜವಾದ ಕ್ಷತ್ರಿಯ ರಕ್ತವಿದ್ದರೆ ಅಧರ್ಮಕ್ಕೆ ಆಸ್ಪದ ಕೊಡಬೇಡ.

ಕೃಷ್ಣ : ಕರ್ಣಾ, ಧರ್ಮಾಧರ್ಮಗಳ ಪೌರೋಹಿತ್ಯ ಮಾಡಲು ನೀನಾವ ನೀತಿಶಾಸ್ತ್ರವಿದನೋ ?

ಕರ್ಣ : ಕೃಷ್ಣಾ, ನನ್ನ ನೀತಿ ನಿಷ್ಠುರತೆಯ ಬಗೆಗೆ ಲೋಕ ಚಕ್ಷುವಾದ ಸೂರ್ಯದೇವನೂ ಸರ್ವಧಾರಿಣಿಯಾದ ಸೃಷ್ಟಿದೇವಿಯೂ ಸರ್ವತ್ರ ಸಂಚಾರಿಯಾದ ವಾಯುದೇವನೂ ಮಾನವ ರೂಪದಿಂದ ಮೆರೆಯುವ ಮಾಧವನೂ ಸಾಕ್ಷ್ಯವಾಗಿದ್ದಾರೆ. ರಣದೇವತೆ ನನ್ನ ಧರ್ಮಯುದ್ಧವನ್ನು ಕಣ್ಣಾರೆ ಕಾಣುತ್ತಿದ್ದಾಳೆ. ಸ್ವಾರ್ಥ ಸಾಧುಗಳ ಸವಿಮಾತುಗಳಿಗೆ ಸೋಲಲಿಲ್ಲ; ನನ್ನ ವ್ಯಕ್ತಿತ್ವವನ್ನು ಮರೆಯಲಿಲ್ಲ; ನನ್ನ ಅನ್ನ ಕೊಟ್ಟವನಿಗೆ ಅನ್ಯಾಯ ಮಾಡಲಿಲ್ಲ— ಇಷ್ಟೇ ಬಿರುದು ಸಾಕು, ಕರ್ಣನ ಧರ್ಮ ನೀತಿನಿಷ್ಠುರತೆಗೆ.

ಕೃಷ್ಣ : ಕೌರವ ಕುನ್ನಿಯ ಕೈಸೆರೆಯಾಳಾಗಿ ನೀನು ಆಚರಿಸಿದ ಅನ್ಯಾಯ ಅಧರ್ಮಗಳನ್ನು ಸಮಗ್ರ ಸೃಷ್ಟಿಯೇ ಕಣ್ಣಾರೆ ಕಂಡಿದೆ. ಪಾಂಡವರನ್ನು ಬಗೆ ಬಗೆಯಿಂದ ಛಲಿಸುವಾಗ, ಅರಗಿನಮನೆಯಲ್ಲಿ ಅವರನ್ನು ಸುಡಹೋದಾಗ, ಅವರಿಗೆ ಜೂಜಿನಲ್ಲಿ ಮೋಸಮಾಡುವಾಗ, ದ್ರೌಪದಿಯ ವಸ್ತ್ರಾಪಹರಣದ ಕಾಲಕ್ಕೆ ಗಹಗಹಿಸಿ ನಗುವಾಗ, ವನವಾಸದಲ್ಲಿ ಅವರಿಗೆ ಇಲ್ಲಿಲ್ಲದ ತೊಂದರೆಗಳನ್ನು ಕೊಡುವಾಗ, ವನವಾಸ ಮುಗಿದಮೇಲೆ ರಾಜ್ಯ

ವನ್ನು ಕೊಡಬೇಡವೆಂದು ಕೌರವನಿಗೆ ಹೇಳುವಾಗ, ಮೊನ್ನೆ ಮೊನ್ನೆ ಕುಮಾರ ಅಭಿಮನ್ಯುವನ್ನು ಮೋಸದಿಂದ ಕೊಲ್ಲುವಾಗ—ಕರ್ಣಾ, ನಿನ್ನ ಧರ್ಮಬುದ್ಧಿ ಎಲ್ಲಡಗಿತ್ತು ?

**ಕರ್ಣ :** ಕೃಷ್ಣಾ, ನಾನು ಎಷ್ಟೆಂದರೂ ಸೂತಪುತ್ರನಷ್ಟೆ. ನನಗೆ ಧರ್ಮಾಧರ್ಮಗಳ ಜ್ಞಾನವಿಲ್ಲವೆಂದು ತಿಳಿ. ಆದರೆ, ನೀನು ಮಹಾ ರಾಜ ಕಾರಣನಿಪುಣ ! ಸಾಮಾನ್ಯರ ತಿಳಿವಳಿಕೆಯಂತೆ ಭಗವಂತನ ಅವತಾರ. ಎಂದ ಮೇಲೆ, ಈಗ ನೀನು ಕುದುರೆಗಳ ಕಡಿವಾಣಗಳನ್ನು ಹಿಡಿದಿದ್ದರೇನಾಯಿತು—ನಿನ್ನ ದೇವತ್ವಕ್ಕೆ ತಕ್ಕ ಕ್ಷತ್ರಿಯರ ಕುತ್ಸಿತವನ್ನು ಬಿಟ್ಟು, ಧರ್ಮ ಮಾರ್ಗಗಳನ್ನು ಮುಂದೆ ಮಾಡಬೇಕಲ್ಲವೇ ?

ಕೃಷ್ಣ : ಇಲ್ಲ, ಇಲ್ಲ; **ಶಠಂ ಪ್ರತಿ ಶಾಠ್ಯಂ** ಎಂಬುದೇ ನನ್ನ ಧರ್ಮ ಸೂತ್ರ.

ಕರ್ಣ : ಎಂತಹ ಮರುಳು ಕೃಷ್ಣಾ ! ಸಿಟ್ಟಿಗೆ ಸಿಟ್ಟು, ಸೇಡಿಗೆ ಸೇಡು, ರಕ್ತಕ್ಕೆ ರಕ್ತ, **ಶಠಂ ಪ್ರತಿ ಶಾಠ್ಯಂ ತತ್ವಗಳು ಜಗತ್ತಿನಲ್ಲಿ ಕಲಹದ ಕಾಳ್ಗಿಚ್ಚನ್ನು ಕೆಣಕಬಹುದಲ್ಲದೆ ಶಾಂತಿಯ ಸಾಮ್ರಾಜ್ಯವನ್ನು ಸ್ಥಾಪಿಸಬಲ್ಲವೇ?** ವಿಶ್ವಶಾಂತಿಯಾಗಬೇಕೆನ್ನುವುದೇ ನಿನ್ನಉದ್ದೇಶವಲ್ಲವೇ ?

ಕೃಷ್ಣ : ನನ್ನ ತತ್ತ್ವದಂತೆ, ದುರ್ಜನ ದಮನವಾದರೆ ಶಾಂತಿಸ್ಥಾಪನೆ ತಾನಾಗಿಯೇ ಸಾಧ್ಯವಾಗಬಹದು.

**ಕರ್ಣ :** ಇದೆಂತಹ ಮರುಳುತನದ ಮೆರವಣಿಗೆ ! ಶಸ್ತ್ರಾಸ್ತ್ರಗಳನ್ನು ಸಜ್ಜೀಕರಿಸಿಕೊಂಡು ಶಾಂತಿ ಸ್ಥಾಪನೆಯ ಸೂತ್ರಗಳನ್ನು ಮುಂದೆ ಮಾಡುವುದು, ಕೃಷ್ಣಾ, ಸ್ವಾರ್ಥಸಾಧನೆಯ ಸಂಪತ್ತಿನ ಸೊಕ್ಕಿನ ನಂಜನ್ನು ನುಂಗಿದವರ ಬಾಯಿಂದ ಬರುವ ಬುರುಗು ಮಾತ್ರ ! **'ಶಠಂ ಪ್ರತಿ ಸತ್ಯಂ' ಎಂದು ಹೇಳಿದಾಗಲೇ ವಿಶ್ವಕ್ಕೆ ಶಾಂತಿ ಸಮೃದ್ಧಿ !** ಈ ಮಂತ್ರವೇ ತಾರಕವಾಗಬಲ್ಲುದು ಜಗತ್ತಿಗೆ. ಇಂದಿಲ್ಲದಿದ್ದರೂ ಎಂದಾದರೊಮ್ಮೆ ಈ ಮಂತ್ರವಾಚನಕ್ಕೆ ನೀನೇ ಮಹಾತ್ಮನಾಗಿ ಹುಟ್ಟುವಿಯೆಂತೆ ! ಆಗಲಾದರೂ ತಿಳಿದೀತು, ನನ್ನ ಮಾತಿನ ಸತ್ಯ !

ಕೃಷ್ಣ : ಕರ್ಣಾ, ಮಾತಿನಲ್ಲಿ ಹೊತ್ತುಗಳೆಯುವ ಹೊಸ ಹಂಚಿಕೆ ಯನ್ನು ಹುಡುಕುತ್ತಿರುವೆಯಲ್ಲ.

ಕರ್ಣ : ಆ ಹಂಚಿಕೆ ನಿನಗೇ ಮೀಸಲಾಗಿದೆ. ಕುರುಕ್ಷೇತ್ರದ ರಣ ರಂಗವನ್ನು ಕಂಡು ಕಿಂಕರ್ತವ್ಯ ಮೂಢನಾದ ಕಿರೀಟಿಗೆ ಭಗವದ್ಗೀತೆಯ ಕಿವಿಮಾತುಗಳನ್ನು ಹೇಳುತ್ತ ಕಾಲವನ್ನು ಕಳೆದವ ನೀನೇ ಅಲ್ಲವೇ? ಆಗಲಿ! ಭೂದೇವೀ, ನಿನ್ನ ಗಂಡಂದಿರಾದ ಪುಂಡ ಕ್ಷತ್ರಿಯರನ್ನು ಇಪ್ಪತ್ತೊಂದು ಸಲ ಕೆಂಡಾಡಿದ ಪ್ರಚಂಡ ಪರಾಕ್ರಮಿ ಪರಶುರಾಮನ ಪಟ್ಟಶಿಷ್ಯನೆಂದು ನೀನು ನನ್ನ ಮೇಲೆ ಆತನ ಸೇಡನ್ನು ತೀರಿಸಿಕೊಳ್ಳುತ್ತಿರು ವೆಯಾ? ಒಳ್ಳೆಯದು; ಅರ್ಜುನಾ, ನೆಲದ ಮೇಲೆಯೇ ನಿಂತು ಯುದ್ಧ ಮಾಡುವೆ. ಬಿಡುಬಾಣಗಳನ್ನು. ಒಮ್ಮೆ ಈ ಭೂಮಿಯ ರಿಣ ಮುಗಿದು ಹೋಗಲಿ.

ಕೃಷ್ಣ : ಅರ್ಜುನಾ, ತಡವೇಕೆ? ಬಿಡು ಬಾಣಗಳನ್ನು (ಅರ್ಜುನನ ಬಾಣಪ್ರಯೋಗ)

ಕರ್ಣ : ಹಾಯ್ ಕೌರವೇಶ್ವರಾऽऽ.........! (ಎಂದು ಕರ್ಣ ಬೀಳುವನು). (ಕರ್ಣ ಸತ್ತ, ಕರ್ಣ ಸತ್ತ ಎಂಬ ಕೋಲಾಹಲದ ದನಿ)

ಕೃಷ್ಣಾ, ಈಗಲಾದರೂ ನಿನ್ನ ಕಾರಸ್ಥಾನಕ್ಕೆ ಕಳೆಕಟ್ಟಿತೇ? ಹಾऽऽ! (ನರಳುವ ದನಿ) ಶಲ್ಯರಾಜಾ, ಸುಯೋಧನ ಸಮ್ರಾಟನೆಲ್ಲಿಯಾದರೂ ಕಾಣುತ್ತಿರುವನೇ? ಮಾತಾಡಲಾರೆ; ಮರ್ಮಸ್ಥಾನಕ್ಕೆ ಪೆಟ್ಟು ಬಿದ್ದಿದೆ. ಮುಗಿಯಿತು; ಈ ಭೂಮಿಯ ರಿಣऽऽऽ!

ಶಲ್ಯರಾಜ : ಕರ್ಣಾ, ಕೌರವನನ್ನು ಕರೆತರಲೇ ?

ಕರ್ಣ : (ನರಳುತ್ತ ತಡೆತಡೆದು) ಬೇಡ, ಬೇಡ (ನರಳುತ್ತ) ನಾನೇ ನಾದರೂ ನಿನಗೆ ಅಪಮಾನ ಮಾಡಿದ್ದರೆ ಕ್ಷಮಿಸಿಬಿಡು. ಶಲ್ಯರಾಜಾ, ಮಾತಾಡಲಾರೆ. ನನ್ನ ನಮಸ್ಕಾರ ಪೂರ್ವಕವಾಗಿ—ಹಾऽऽऽ— ಸಮ್ರಾ ಟನಿಗೆ ಇಷ್ಟೇ ಹೇಳಬೇಕು: ಕರ್ಣನ ಕೊನೆಗಾಲದೊಡನೆ ಕುರುಕ್ಷೇತ್ರ ಕಾಳೆಗವೂ ಕೊನೆಗಾಣಲಿ. ಕಲಹದಿಂದ ಯಾರ ಕಲ್ಯಾಣವೂ ಇಲ್ಲ. ಈ ಭೂಮಿಯೊಡೆತನ ಯಾರಿಗೂ ಸ್ಥಿರವಾಗಿರಲಿಲ್ಲ, ಇರುವುದೂ ಇಲ್ಲ.

ಹಾಽಽಽ! ಇಂದು ಕರ್ಣನ ಕೊನೆಯಾಯಿತು. ನಾಳೆ ಸುಯೋಧನ ಸಾಯ ಬಹುದು. ಮೂರನೆಯ ದಿನ ಧರ್ಮರಾಜನ ದುರಂತವೂ ಆಗಬಹುದು. ನಾಲ್ಕನೆಯ ದಿನ ಕಾರಸ್ಥಾನಿಯೆನಿಸಿದ ಕೃಷ್ಣನಿಗೂ ಕೊನೆಗಾಲ ಬಿಟ್ಟಿದ್ದಲ್ಲ! ಕಾಲನ ಕುಟಿಲ ಕೈಚಳಕಕ್ಕೆ ಯಾರೂ ಈಡಲ್ಲ, ಯಾರೂ ಇದಿರಲ್ಲ! ಹಾಽಽಽ! ಶಲ್ಯರಾಜಾ ಕನುವು ಕುಂದುತ್ತಿದೆ. ಕೊನೆಯ ಮಾತು: ಒಡೆಯ ನಿಗಾಗಿ ಕರ್ಣ ಕಡುಗಲಿಯಂತೆ ಕೊನೆಯವರೆಗೂ ಕಾದಾಡಿದ ನೆಂಬುದನ್ನು ಮಾತ್ರ ಕೌರವೇಶ್ವರನಿಗೆ ಮರೆಯದೆ ಹೇಳು. ನ–ಮ–ಸ್ಕಾ–ರ! ಕೃಷ್ಣಾ–ತಾಯಿ ಕುಂತೀಽಽಽ (ಪ್ರಾಣ ಬಿಡುವನು)

**ಧರ್ಮರಾಜ :** ಶ್ರೀಕೃಷ್ಣಾ ಇದೇನಿದು? ತಾಯಿ ಕುಂತೀಽಽ?

**ಸೇವಕ :** (ತೇಕುತ್ತ ಬಂದು) ಮಹಾರಾಜರೇ, ಕುಂತೀದೇವಿ ಕರ್ಣನ ಕೊಲೆಯನ್ನು ಕೇಳಿ ಕಣ್ಣೀರು ಸುರಿಸುತ್ತ ಇತ್ತಲೇ ಬರುತ್ತಿದ್ದಾರೆ.

**ಧರ್ಮರಾಜ :** ಕೃಷ್ಣಾ, ಇದೇನೀ ಹೊಸ ಸನ್ನಿವೇಶ? ಪಾಂಡ ವರಿಗೆ ಸ್ವರಾಜ್ಯ ಸಂಪ್ರಾಪ್ತಿಯಾಯಿತೆಂದು ಸಂತೋಷವಾಗಬೇಡವೇ ಕುಂತೀಮಾತೆಗೆ? ಗಾಂಡೀವಿಯ ಗಂಡಾಂತರ ಮಣ್ಣು ಮುಕ್ಕಿತೆಂದು ಮಹದಾನಂದವಾಗಬೇಕಲ್ಲವೆ ಮಾತೃ ದೇವತೆಗೆ? ಹಾಗಿಲ್ಲದೆ ಮಾತೆಯ ಮರುಗಿಗೆ ಕಾರಣವೇನು? ಅಯ್ಯೋ, ಬಾಯಲ್ಲಿ ಉಸಿರಿಲ್ಲದೆ ಓಡಿ ಬರುತ್ತಿರುವಳಲ್ಲ ಕುಂತೀದೇವಿ!

**ಕುಂತಿ :** ( ಬಂದು ದುಃಖಿಸುತ್ತ ) ಕಂದಾ, ಕಂದಾ! ಅಯ್ಯೋ ಕರ್ಣಾಽಽಽ! ನಿನ್ನ ತಾಯಿ ಕುಂತಿ ಬಂದಿರುವೆ. ಕಣ್ತೆರೆದು ನೋಡುವು ದಿಲ್ಲವೇ ಅಪ್ಪಾ! ಒಮ್ಮೆ, ತಾಯೀ ಎಂದು ಬಾಯ್ಬಿಟ್ಟು ಕರೆಯುವುದಿಲ್ಲವೇ ಕಂದಾಽಽಽ! (ಅಳುವಳು)

**ಧರ್ಮರಾಜ :** ಇದೇನಮ್ಮ, ಮರುಳು ಹಿಡಿಯಿತೇ ನಿನಗೆ? ಕರ್ಣ ಸೂತಪುತ್ರನಲ್ಲವೇ?

**ಕುಂತಿ :** ಅಲ್ಲ, ಅಲ್ಲ, ಅಲ್ಲಽಽ! ಕರ್ಣ ಕ್ಷಾತ್ರದೇವತೆಯ ಹೊಟ್ಟೆ ಯಿಂದಲೇ ಹುಟ್ಟಿದವ. ಸೂರ್ಯದೇವನ ಸುಕುಮಾರ! ಧರ್ಮರಾಜಾ, ನಿನ್ನ ಹಿರಿಯ ಅಣ್ಣಽಽಽ! (ಅಳುವಳು.)

ಧರ್ಮರಾಜ : ಈ ಮಾತ್ನು ಮೊದಲೇ ಏಕೆ ಹೇಳಲಿಲ್ಲವಮ್ಮಾಽಽ! ಹಾಗಿದ್ದರೆ ನಾನೇ ಹೋಗಿ ಅವನ ಕಾಲುಗಳನ್ನು ಹಿಡಿದು ಮನವೊಲಿಸುತ್ತಿದ್ದೆ; ಕೈ ಹಿಡಿದು ಕರೆತಂದು ಪಟ್ಟಗಟ್ಟುತ್ತಿದ್ದೆ; ನಾನು ಅವನ ಕೈಸನ್ನೆಯ ಆಳಾಗಿ ಹೇಳಿದಂತೆ ಕೇಳಿಕೊಂಡು ಕೆಲಸಮಾಡುತ್ತಿದ್ದೆ! ಎಂತಹ ಅನ್ಯಾಯ ಮಾಡಿದಿ ತಾಯೀಽಽಽ!

ಅರ್ಜುನ : ಶ್ರೀಕೃಷ್ಣ ದೇವಾ, ನಿನಗೆ ಇದು ಮೊದಲು ಗೊತ್ತಿರಲಿಲ್ಲವೇ? ನಮ್ಮಿಬ್ಬರ ರಕ್ತ ಸಂಬಂಧ ನನ್ನನ್ನು ಕ್ಷಣ-ಕ್ಷಣಕ್ಕೆ ಅಡ್ಡಗಿಸುತ್ತಿತ್ತು. ಅದಕ್ಕಾಗಿ ಒಲ್ಲೆ-ಒಲ್ಲೆನೆಂದರೂ ನನ್ನನ್ನು ನೀನೇ ಹೋರಾಟಕ್ಕೆ ಹುರಿಗೊಳಿಸಿದೆಯಲ್ಲ! ನಮ್ಮಣ್ಣನೇನು ಮಾಡಿದ್ದ ನಿನಗೆ? ಅಣ್ಣಾ ಕರ್ಣಾ, ಈ ಪಾಪಿಯಿಂದ...... ( ಅಳುವ )

ಕೃಷ್ಣ : ಅಳಬೇಡ ಅರ್ಜುನಾ, ಸೃಷ್ಟಿಯ ಸಂಕಲ್ಪವನ್ನು ಬದಲಿಸುವ ಬಲ ಮನುಷ್ಯಮಾತ್ರರಿಗಿಲ್ಲ. ನಾವು ನಿಮಿತ್ತ ಮಾತ್ರರು; ಅಷ್ಟೇ. ಕೊಲುವುದೂ ಕಾಯುವುದೂ ಸೃಷ್ಟಿಯ ಸ್ವಾಧೀನ.

ಅರ್ಜುನ : ಅಮ್ಮಾ, ನೀನಾದರೂ ನಿಜಸಂಗತಿಯನ್ನು ತಿಳಿಸಬಾರದಿತ್ತೇ! ಸೂತಪುತ್ರ, ಸೂತಪುತ್ರ ಎಂದು ಹೆಜ್ಜೆ ಹೆಜ್ಜೆಗೆ ನನ್ನ ಅಣ್ಣನ ಎದೆಗೆ ಬರೆಯನ್ನು ಕೊಟ್ಟೆನಲ್ಲ! ಪರಮ ಪಾಪಿ ನಾನು.

ಧರ್ಮರಾಜ : ನೀನೊಬ್ಬನೇ ಅಲ್ಲ ಅರ್ಜುನಾ! ಜಾತಿಯ ಜಂಭವನ್ನು ತೋರಿದ ನಾವೆಲ್ಲರೂ ಪರಮ ಪಾಪಿಗಳು. ಕೃಷ್ಣಾ, ಗುಣಕ್ಕೆ ಗೌರವವನ್ನು ಕೊಟ್ಟ ಆ ಸುಯೋಧನನೇ ನಿಜವಾದ ಮಹಾನುಭಾವ. ಅವನಿಗೇ ಸಮ್ರಾಟ ಪದವಿ ಸಲ್ಲಬೇಕು.

ಕುಂತಿ : ಅಯ್ಯೋ, ಹಾಳಾದ ಸಮ್ರಾಟ್ ಪಟ್ಟವೇ! ಕರ್ಣಾ, ಕುಮಾರಾ, ಸೊಕ್ಕಾನೆಯ ಶುಂಡಿಲವನ್ನು ನೆಳೆದೊಗೆಯುವ ನಿನ್ನ ದೇಹ ರಣದೇವತೆಯೊಡನೆ ರಂಗಪಂಚಮಿಯಾಡಿ ಕೊರಗಿ ಕಡ್ಡಿಯಾಗಿದೆಯಲ್ಲಪ್ಪಾ! ಕರ್ಣಾ, ನಾನು ತಾಯಿಯಾಗಿ ನಿನ್ನ ಲಾಲನೆ ಪಾಲನೆ ಮಾಡಲಿಲ್ಲ.

ಎಂದು ದಿನವೂ ನಿನ್ನನ್ನು ಸಿಂಗರಿಸಿ ಸೊಬಗನ್ನು ನೋಡಲಿಲ್ಲ. ಅದಕ್ಕಾಗಿ—ಆ ಪಾಪಕ್ಕಾಗಿ—ಈಗ ಹೆಣದ ಮುಂದೆ ಹೃದಯವನ್ನು ಹರಿದುಕೊಳ್ಳುವ ಭಾಗ್ಯ ಬಂದಿತೇ ನನಗೇಽಽ! ತಾಯಿಯ ಕರುಣದ ಕೂಗು ಕಿವಿಗೆ ಕೇಳುವುದಿಲ್ಲವೇ ಕಂದಾಽಽಽ! ಮಾತಾಡು ನನ್ನಪ್ಪಾಽಽ! ಅವ್ವಾ, ಎಂದು ಅಸ್ಪಷ್ಟವಾಗಿಯಾದರೂ ಕರೆಯಲಾರೆಯಾ ಕಂದಾಽಽ!

**ಧರ್ಮರಾಜ :** ತಾಯೀ, ಆದದ್ದು ಆಗಿ ಹೋಗಿದೆ. ಹೃದಯದಲ್ಲಿ ಹುದುಗಿದ್ದ ಹಂಬಲವೇನಾದರೂ ಇದ್ದರೆ ಹೇಳಮ್ಮಾಽಽ!

**ಕುಂತಿ** ಇನ್ನೇನು ಹೇಳಲಿ ಕಂದಾ! ತನ್ನ ಅಂತ್ಯ ಸ್ಕಾರ ಧರ್ಮರಾಜನ ಕೈಯಿಂದಲೇ ಆಗಬೇಕೆಂದು ಕರ್ಣನ ಇಚ್ಛೆಯಿತ್ತು. ಅದನ್ನಿಷ್ಟು ನೆರವೇರಿಸುವೆಯಾ?

**ಧರ್ಮರಾಜ :** ಶ್ರೀಕೃಷ್ಣಾ, ಕರ್ಣನಿಗೆ ಕ್ಷಾತ್ರ ಸಂಸ್ಕಾರವಾಗಬೇಕಷ್ಟೇ?

**ಕೃಷ್ಣ** ಅದಕ್ಕೆ ಅನುಮಾನವೇಕೆ? ಆತನು ಬರಿಯ ಕ್ಷತ್ರಿಯನಷ್ಟೇ ಅಲ್ಲ; ಕೆಚ್ಚೆದೆಯ ಕ್ಷಾತ್ರ ಕಡುಗಲಿಗಳ ಕಣ್ಮಣಿ! **ಅವನ ಧರ್ಮಾಧರ್ಮ ವಿವೇಕದ ಭವಿಷ್ಯದ್ವಾಣಿ ಬರಲಿರುವ ಕಾಲದಲ್ಲಿ ವಿಶ್ವಕ್ಕೇ ತಾರಕ ಮಂತ್ರವಾಗುವುದು.** ಮುಂದೆ ರಚಿತವಾಗುವ ಭಾರತ ಚರಿತ್ರಗಳಲ್ಲಿ ಕರ್ಣನದೇ ಪ್ರಧಾನ ಪಾತ್ರವಾಗುವದು.

**ಧರ್ಮರಾಜ :** ಆಯಿತು, ಕೃಷ್ಣಾ, ಅಣ್ಣನಿಗೆ ಅಗ್ನಿ ಸಂಸ್ಕಾರ ಮಾಡುವೆ. ಈಗ ಆತನ ಕೀರ್ತಿಯನ್ನು ಭಗವಂತನಾದ ನಿನ್ನ ಮುಖದಿಂದಲೇ ಕೇಳಬಯಸುವೆ.

**ಕೃಷ್ಣ :** ಆಗಬಹುದು.

ನೆನೆಯದಿರಣ್ಣ ಭಾರತದೊಳಿಂ ಪೆರರಾರುಮನೊಂದೆ ಚಿತ್ತದಿಂ।
ನೆನೆವೊಡೆ ಕರ್ಣನಂ ನೆನೆಯು, ಕರ್ಣನೊಳಾರ್
ದೊರೆ ಕರ್ಣನೇರು ಕ।
ರ್ಣನ ಕಡು ನನ್ನಿ ಕರ್ಣನಳವಂಕದ ಕರ್ಣನ ಚಾಗವೆಂದು ಕ।
ರ್ಣನ ಪಡೆ ಮಾತಿನೊಳ್ ಪುದಿದು **ಕರ್ಣರಸಾಯನ**
**ಮಲ್ತೆ ಭಾರತಂ** ॥

**ಧರ್ಮರಾಜ :** ಅದೋ, ಅದೋ ಕೃಷ್ಣಾ, ದೇದೀಪ್ಯಮಾನ ಜ್ಯೋತಿಯೊಂದು ಅಗ್ನಿ ನಾರಾಯಣನಿಂದ ಹೊರಟು ಸೂರ್ಯಮಂಡಲವನ್ನು ಸೇರುತ್ತಿದೆ. ( ಧ್ವನಿಯಿಂದ ತೋರಿಸುವುದು.) ಪಿತಾಪುತ್ರರ ಸುಯೋಗ ವಾಯಿತು! ಜೈ ಭಾರತ ವೀರಽಽ!

ತೆರೆ

ರಂಗ-ರಂಜನ ಮುಗಿದುದು